RNI No. **KARBIL/2001/47147**

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೮<br>Volume 148 | ಬೆಂಗಳೂರು, ಗುರುವಾರ, ಜೂನ್ ೧೩, ೨೦೧೩ (ಜ್ಯೇಷ್ಠ ೨೩, ಶಕ ವರ್ಷ ೧೯೩೫)<br>Bangalore, Thursday, June 13, 2013 (Jyeishta 23, Shaka Varsha 1935) | ಸಂಚಿಕೆ ೨೪<br>Issue 24 |
|---|---|---|

## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ವಸತಿ ಸಚಿವಾಲಯ

**ವಿಷಯ:** ಶ್ರೀ ಎಂ.ಎ. ಖಯ್ಯೂಮ್, ಸಮುದಾಯ ಅಭಿವೃದ್ಧಿ ಅಧಿಕಾರಿ ಇವರ ಹುದ್ದೆಯನ್ನು ಕಾರ್ಯಪಾಲಕ ಅಭಿಯಂತರರ ಹುದ್ದೆಯನ್ನಾಗಿ ಮಾರ್ಪಡಿಸುವ ಬಗ್ಗೆ

**ಓದಲಾಗಿದೆ:** ಸರ್ಕಾರಿ ಆದೇಶ ಸಂಖ್ಯೆ: ಹೆಚ್‌ಯುಡಿ 49 ಎಂಸಿಎಸ್ 95, ದಿನಾಂಕ: 01-07-1999

ಸರ್ಕಾರಿ ಅಧಿಸೂಚನೆ ಸಂಖ್ಯೆ: ವಇ 3 ಕೊಮಂಸೇ 06, ದಿನಾಂಕ: 03-11-2010

ಆಯುಕ್ತರು, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಯವರ ಪತ್ರ ಸಂಖ್ಯೆ: ಕಕೊಅಮ/ಆಡಳಿತ/78/ 2012-13/201, ದಿನಾಂಕ: 21-07-2012

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ. (1)ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಗೆ ವೃಂದ ಮತ್ತು ನೇಮಕಾತಿ ಮತ್ತು ಸೇವಾ ನಿಬಂಧನೆ ನಿಯಮಾವಳಿಗಳನ್ನು ಹೊರಡಿಸಲಾಗಿದೆ.

ಮೇಲೆ ಓದಲಾದ ಕ್ರ.ಸಂ. (2)ರ ಸರ್ಕಾರದ ಅಧಿಸೂಚನೆಯಲ್ಲಿ ಮಂಡಳಿಯ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ತಿದ್ದುಪಡಿ ಮಾಡಿ ಅಧಿಸೂಚನೆ ಹೊರಡಿಸಲಾಗಿದೆ.

ಮೇಲೆ ಓದಲಾದ ಕ್ರಮಸಂಖ್ಯೆ: (3)ರ ಪತ್ರದಲ್ಲಿ ಆಯುಕ್ತರು, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ, ಬೆಂಗಳೂರು ಇವರು ಸರ್ಕಾರಕ್ಕೆ ಪ್ರಸ್ತಾವನೆ ಕಳುಹಿಸಿ, ಶ್ರೀ ಎಂ.ಎ. ಖಯ್ಯೂಮ್, ಸಮುದಾಯ ಅಭಿವೃದ್ಧಿ ಅಧಿಕಾರಿ, ಇವರು ಮಂಡಳಿಯಲ್ಲಿ ತಾಂತ್ರಿಕ ಇಂಜಿನಿಯರ್‌ರಾಗಿ ಕರ್ತವ್ಯ ನಿರ್ವಹಿಸುತ್ತಿದ್ದು, ಮಂಡಳಿಯ ವೃಂದ ಮತ್ತು ನೇಮಕಾತಿ (ತಿದ್ದುಪಡಿ) ಅಧಿಸೂಚನೆ ದಿನಾಂಕ: 03-11-2010ರನ್ವಯ ಮಂಡಳಿಗೆ 11 ಹುದ್ದೆ ಕಾರ್ಯಪಾಲಕ ಅಭಿಯಂತರರು ಹಾಗೂ 1 ಸಮುದಾಯ ಅಭಿವೃದ್ಧಿ ಅಧಿಕಾರಿ ಎಂದು ಮಂಜೂರು ಮಾಡಲಾಗಿದೆ. ಅದರಂತೆ ಸದರಿಯವರಿಗೆ ಸಹಾಯಕ ಕಾರ್ಯ ನಿರ್ವಾಹಕ ಅಭಿಯಂತರರ ಹುದ್ದೆಯಿಂದ ಸಮುದಾಯ ಅಭಿವೃದ್ಧಿ ಅಧಿಕಾರಿ ಹುದ್ದೆಗೆ ಮುಂಬಡ್ತಿ ನೀಡಲಾಗಿದೆ. ಹಾಗೂ ಸದರಿಯವರು ಮುಂಬಡ್ತಿ ಪಡೆದಾಗಿನಿಂದ ಈವರೆವಿಗೂ ಕಾರ್ಯಪಾಲಕ ಅಭಿಯಂತರರ ಹುದ್ದೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಮಂಡಳಿಯ ನಿರ್ವಹಣೆ ಮಾಡುತ್ತಿರುವ ಕೇಂದ್ರ ಮತ್ತು ರಾಜ್ಯ ಸರ್ಕಾರದ ಯೋಜನೆಗಳನ್ನು ಪರಿಣಾಮಕಾರಿಯಾಗಿ ನಿರ್ವಹಣೆ ಮಾಡುವ ನಿಟ್ಟಿನಲ್ಲಿ ಸದರಿ ಅಧಿಕಾರಿಯವರು ತಾಂತ್ರಿಕವಾಗಿ ಸಿವಿಲ್ ಇಂಜಿನಿಯರಿಂಗ್‌ನಲ್ಲಿ ಅನುಭವಿಯಾಗಿರುವುದರಿಂದ ಪ್ರಸ್ತುತ ಮಂಡಳಿಗೆ ಕೇಂದ್ರ ಸರ್ಕಾರದಿಂದ ಪುರಸ್ಕೃತವಾಗಿರುವ ಹೊಸ ಯೋಜನೆಗಳಾದ RAY (ರಾಜೀವ್ ಗಾಂಧಿ ಆವಾಸ್ ಯೋಜನೆ) ಹಾಗೂ ಇತರೇ ಯೋಜನೆಗಳನ್ನು ಮಂಡಳಿಯಲ್ಲಿ ಸಮರ್ಪಕವಾಗಿ ಅನುಷ್ಠಾನಗೊಳಿಸಬೇಕಾಗಿರುವುದರಿಂದ ಶ್ರೀ ಎಂ.ಎ. ಖಯ್ಯೂಮ್, ಸಮುದಾಯ ಅಭಿವೃದ್ಧಿ ಅಧಿಕಾರಿ ಹುದ್ದೆಯಿಂದ ಕಾರ್ಯಪಾಲಕ ಅಭಿಯಂತರರ ಹುದ್ದೆಗೆ ಮಾರ್ಪಡಿಸಬೇಕಾಗಿರುತ್ತದೆ. ಈ ಎರಡು ಹುದ್ದೆಗಳು ತತ್ಸಮಾನ ಹುದ್ದೆಗಳಾಗಿದ್ದು, ಮಾರ್ಪಡಿಸಿದಲ್ಲಿ ಮಂಡಳಿಗೆ ಯಾವುದೇ ತೆರನಾದ ಆರ್ಥಿಕ ಹೊರೆ ಅಥವಾ ಯಾವುದೇ ರೀತಿಯ ವೇತನ ಪರಿಷ್ಕರಣೆ ವ್ಯತ್ಯಾಸಗಳು ಆಗುವುದಿಲ್ಲವೆಂದು ತಿಳಿಸಿ Karnataka Slum Clearance Board Services (Cadre & Recruitment and condition of Service) (Amendment) Rules 2010ರ Amendment of Schedule-I ಕ್ರಮಸಂಖ್ಯೆ: 4ರಲ್ಲಿ ಸಮುದಾಯ ಅಭಿವೃದ್ಧಿ ಅಧಿಕಾರಿ (Community Development Officer) ಹುದ್ದೆಯನ್ನು ಮಂಡಳಿಯ ವೃಂದ ಮತ್ತು ನೇಮಕಾತಿ ನಿಯಮಗಳ ಪರಿಷ್ಕರಣೆಯಲ್ಲಿ, ಮರು ಸೃಜನೆ ಮಾಡುವ ಷರತ್ತಿಗೊಳಪಟ್ಟು, "ಸಮುದಾಯ ಅಭಿವೃದ್ಧಿ ಅಧಿಕಾರಿ" ಹುದ್ದೆಯಿಂದ "ಕಾರ್ಯಪಾಲಕ ಅಭಿಯಂತರರ ಹುದ್ದೆಗೆ" ಮಾರ್ಪಡಿಸಲು ಸರ್ಕಾರದ ಅನುಮೋದನೆ ನೀಡುವಂತೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಆಯುಕ್ತರು, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ, ಬೆಂಗಳೂರು, ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 27 ಕೊಮಂಸೇ 2012, ಬೆಂಗಳೂರು, ದಿನಾಂಕ: 29ನೇ ಆಗಸ್ಟ್, 2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಯ ವೃಂದ ಮತ್ತು ನೇಮಕಾತಿ ನಿಯಮಗಳು 2010ರ ತಿದ್ದುಪಡಿಯನ್ನು ಪರಿಷ್ಕರಿಸಲು ಷರತ್ತಿಗೊಳಪಟ್ಟು **"ಸಮುದಾಯ ಅಭಿವೃದ್ಧಿ ಅಧಿಕಾರಿ"** ಹುದ್ದೆಯನ್ನು **"ಕಾರ್ಯಪಾಲಕ ಅಭಿಯಂತರ"** ಹುದ್ದೆಯನ್ನಾಗಿ ತಾತ್ಕಾಲಿಕ ವ್ಯವಸ್ಥೆಗನುಸಾರವಾಗಿ ಮಾರ್ಪಡಿಸಿ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ನಾಗಣ್ಣ,**
ಪೀಠಾಧಿಕಾರಿ–4,
ವಸತಿ ಇಲಾಖೆ.

**P.R. 560**

## ವಸತಿ ಸಚಿವಾಲಯ

**ವಿಷಯ:** ಕೇಂದ್ರ ಪುರಸ್ಕೃತ ನರ್ಮ್ ಯೋಜನೆಯ ಐಹೆಚ್ಎಸ್‌ಡಿಪಿ ಯೋಜನೆ ಕೇಂದ್ರ ಹಾಗೂ ರಾಜ್ಯ ಸರ್ಕಾರದ ಅನುದಾನ ಬಿಡುಗಡೆ ಬಗ್ಗೆ

**ಓದಲಾಗಿದೆ:**
1. ಆಯುಕ್ತರು, ಕ ಕೊ ಅ ಮ, ಬೆಂಗಳೂರು ಇವರ ಪತ್ರ ಸಂಖ್ಯೆ: ಕಕೊಅಮ/JnNURAM-IHSDP/ 2012–2013, ದಿನಾಂಕ: 10–08–2012
2. ಸರ್ಕಾರದ ಆದೇಶ ಸಂಖ್ಯೆ: ವಇ/32/ಕೊಮಂಲೆ/2012, ದಿನಾಂಕ: 10–07–2012
3. ಕೇಂದ್ರ ಸರ್ಕಾರದ ಮಂಜೂರಾತಿ/ಬಿಡುಗಡೆ ಪತ್ರ ಸಂಖ್ಯೆ:F.No. 59(6)/PF-1/2011-1694, ದಿನಾಂಕ: 28–03–2012, For Rs. 827.15 Lakhs
4. ಆರ್ಥಿಕ ಇಲಾಖೆಯ Credit Confirmation Slip ಸಂಖ್ಯೆ: FD/13/BGL/2009, ದಿನಾಂಕ: 30–03–2012
5. ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ/4/ಟಿಎಫ್‌ಪಿ/2012, ಬೆಂಗಳೂರು, ದಿನಾಂಕ: 27–04–2012.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಪ್ರಸ್ತಾವನೆಯಲ್ಲಿ ತಿಳಿಸಿರುವಂತೆ ಆಯುಕ್ತರು, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ ಇವರು ಸಮಗ್ರ ವಸತಿ ಮತ್ತು ಕೊಳಚೆ ಪ್ರದೇಶ ಅಭಿವೃದ್ಧಿ ಯೋಜನೆಯಡಿಯಲ್ಲಿ (IHSDP) ರಾಜ್ಯಾದ್ಯಂತ ವಿವಿಧ 34 ನಗರ/ಪಟ್ಟಣಗಳಲ್ಲಿ ಮನೆಗಳ ನಿರ್ಮಾಣ ಹಾಗೂ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೆತ್ತಿಕೊಂಡಿದ್ದು, ವಿವಿಧ ಹಂತಗಳಲ್ಲಿ ಪ್ರಗತಿಯಲ್ಲಿರುತ್ತದೆ. ರಾಮನಗರ ಪಟ್ಟಣದ ಯೋಜನೆಗೆ ಕೇಂದ್ರ ಸರ್ಕಾರದಿಂದ 2ನೇ ಕಂತಿನ ಅನುದಾನ ರೂ. 827.15 ಲಕ್ಷಗಳನ್ನು ಬಿಡುಗಡೆ ಮಾಡಿದ್ದು, ಇದಕ್ಕೆ ಅನುಗುಣವಾಗಿ ರಾಜ್ಯ ಸರ್ಕಾರದ ಅನುದಾನ ರೂ. 724.29 ಲಕ್ಷಗಳು ಒಟ್ಟಾರೆ ರೂ. 1551.44 ಲಕ್ಷಗಳನ್ನು ಮಂಡಳಿಗೆ ಬಿಡುಗಡೆ ಮಾಡಲು ಕೋರಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಸಮಗ್ರ ವಸತಿ ಮತ್ತು ಕೊಳಚೆ ಪ್ರದೇಶ ಅಭಿವೃದ್ಧಿ ಯೋಜನೆಯಡಿಯಲ್ಲಿ (IHSDP) 6 ವಿವಿಧ/ನಗರ ಪಟ್ಟಣಗಳಿಗೆ ಈಗಾಗಲೇ ಕೇಂದ್ರ ಸರ್ಕಾರದ ಅನುದಾನವನ್ನು ಬಿಡುಗಡೆ ಮಾಡಿದ್ದು, ಅದರಂತೆ ರಾಜ್ಯ ಸರ್ಕಾರದ ವಂತಿಗೆ ರೂ. 1115.14 ಲಕ್ಷಗಳನ್ನು 2012–2013ನೇ ಸಾಲಿನ ಆಯವ್ಯಯದ ಕೆಳಗಿನ ಲೆಕ್ಕಶೀರ್ಷಿಕೆಗಳಿಂದ ಬಿಡುಗಡೆ ಮಾಡಿರುತ್ತದೆ:–

1. ಲೆಕ್ಕ ಶೀರ್ಷಿಕೆ 2217–04–191–2–03–106 – (IHSDP) ಯೋಜನೆ : ರೂ. 604.78 ಲಕ್ಷಗಳು
2. ಲೆಕ್ಕ ಶೀರ್ಷಿಕೆ 2217–04–191–2–03–422 – (IHSDP) ಯೋಜನೆ : ರೂ. 510.36 ಲಕ್ಷಗಳು

**ಒಟ್ಟು : ರೂ. 1115.14 ಲಕ್ಷಗಳು**

ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಕೇಂದ್ರ ಸರ್ಕಾರದ ಪತ್ರದಲ್ಲಿ ರಾಮನಗರ ಪಟ್ಟಣದ ಯೋಜನೆಗೆ ಕೇಂದ್ರ ಸರ್ಕಾರದಿಂದ 2ನೇ ಕಂತಿನ ಶೇಕಡ 50 ರಷ್ಟು ಅನುದಾನ ರೂ. 827.15 ಲಕ್ಷಗಳನ್ನು ರಾಜ್ಯ ಸರ್ಕಾರಕ್ಕೆ ಬಿಡುಗಡೆ ಮಾಡಲಾಗಿರುತ್ತದೆ. ಹಾಗೂ ಮೇಲೆ ಕ್ರಮಸಂಖ್ಯೆ (4)ರಲ್ಲಿ ಓದಲಾದ ಪತ್ರದಲ್ಲಿ ಆರ್ಥಿಕ ಇಲಾಖೆಯ ಜಮಾ ಧೃಢೀಕರಣ ಪತ್ರದಲ್ಲಿ ರೂ. 827.15 ಲಕ್ಷಗಳನ್ನು ಧೃಢೀಕರಿಸಿರುತ್ತದೆ. ಸದರಿ ಮೊತ್ತಕ್ಕೆ ರಾಜ್ಯ ಸರ್ಕಾರದ ವಂತಿಗೆ ರೂ. 724.29 ಲಕ್ಷಗಳನ್ನು ಸೇರಿಸಿ ಒಟ್ಟಾರೆ ಮಂಡಳಿಗೆ (827.15+724.29) ರೂ. 1551.44 ಲಕ್ಷಗಳನ್ನು ಬಿಡುಗಡೆ ಮಾಡಬೇಕೆಂದು ಆಯುಕ್ತರು, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ ಇವರು ಪತ್ರದ ಮೂಲಕ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ವಿವರಗಳು ಈ ಕೆಳಕಂಡಂತೆ ಇರುತ್ತದೆ:–

| ಕ್ರಮ ಸಂಖ್ಯೆ | ವಿವರಗಳು | ಕೇಂದ್ರ ಸರ್ಕಾರದ ಅನುದಾನ | ರಾಜ್ಯ ಸರ್ಕಾರದ ಅನುದಾನ | ಒಟ್ಟು |
|---|---|---|---|---|
| 1 | ರಾಮನಗರ ಪಟ್ಟಣ | 827.15 | 724.29 | 1551.44 |
| | **ಒಟ್ಟು ಮೊತ್ತ** | **827.15** | **724.29** | **1551.44** |

ಮೇಲೆ ಓದಲಾದ (5)ರ ಆರ್ಥಿಕ ಇಲಾಖೆಯ ಆದೇಶದಲ್ಲಿ JnNURAM ಯೋಜನೆಗೆ ಭಾರತ ಸರ್ಕಾರದಿಂದ ಹಣ ಪಡೆಯುವ ಯೋಜನಾ ಕಾರ್ಯಕ್ರಮಗಳಿಗೆ ಸಂಬಂಧಿಸಿದಂತೆ ಕೇಂದ್ರ ಸರ್ಕಾರದಿಂದ ಬಿಡುಗಡೆಯಾದ ಅನುದಾನಕ್ಕೆ ಜಮಾ ಧೃಡೀಕರಣ ಪತ್ರದಿಂದ ದೃಢ ಪಟ್ಟ ನಂತರ ಆಡಳಿತ ಇಲಾಖೆಯು ಹಣ ಬಿಡುಗಡೆ ಮಾಡಲು ಆದೇಶ ನೀಡಲಾಗಿರುತ್ತದೆ.

ಸರ್ಕಾರವು ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 32 ಕೊಮಂಲೆ 2012, ಬೆಂಗಳೂರು, ದಿನಾಂಕ: 14ನೇ ಸೆಪ್ಟೆಂಬರ್, 2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಯು ಸಮಗ್ರ ವಸತಿ ಮತ್ತು ಕೊಳಚೆ ಪ್ರದೇಶ ಅಭಿವೃದ್ಧಿ ಯೋಜನೆಯಡಿ (IHSDP) ರಾಮನಗರ ಪಟ್ಟಣದಲ್ಲಿ ಮನೆಗಳ ನಿರ್ಮಾಣ ಹಾಗೂ ಅಭಿವೃದ್ಧಿ ಕಾಮಗಾರಿಗಳಿಗೆ ಕೇಂದ್ರ ಸರ್ಕಾರದ 2ನೇ ಕಂತಿನ ಅನುದಾನ ರೂ. 827.15 ಲಕ್ಷಗಳು ಹಾಗೂ ರಾಜ್ಯ ಸರ್ಕಾರದ ಪಾಲಿನ ಅನುದಾನ ರೂ. 724.29 ಲಕ್ಷಗಳು ಒಟ್ಟಾರೆ (827.15+724.29) ರೂ. 1551.44 ಲಕ್ಷಗಳನ್ನು (ಹದಿನೈದು ಕೋಟಿ ಐವತ್ತೊಂದು ಲಕ್ಷದ ನಲವತ್ತನಾಲ್ಕು ಸಾವಿರ ರೂಪಾಯಿಗಳು ಮಾತ್ರ) 2012-13ನೇ ಸಾಲಿನ ಆಯವ್ಯಯದ ಕೆಳಗಿನ ಲೆಕ್ಕಶೀರ್ಷಿಕೆಗಳಿಂದ ಬಿಡುಗಡೆ ಮಾಡಿ ಸರ್ಕಾರ ಆದೇಶಿಸಿದೆ.

| | | | |
|---|---|---|---|
| I. | ಲೆಕ್ಕ ಶೀರ್ಷಿಕೆ 2217-04-191-2-03-106 – (IHSDP) – {Subsidy} | ಯೋಜನೆ | : ರೂ. 517.14 ಲಕ್ಷಗಳು |
| II. | ಲೆಕ್ಕ ಶೀರ್ಷಿಕೆ 2217-04-191-2-03-422 – (IHSDP) – {SCP} | ಯೋಜನೆ | : ರೂ. 517.15 ಲಕ್ಷಗಳು |
| III. | ಲೆಕ್ಕ ಶೀರ್ಷಿಕೆ 2217-04-191-2-03-423 – (IHSDP) – {TSP} | ಯೋಜನೆ | : ರೂ. 517.15 ಲಕ್ಷಗಳು |
| | **ಒಟ್ಟು** | | **: ರೂ. 1551.44 ಲಕ್ಷಗಳು** |

ಕಾಲಕಾಲಕ್ಕೆ ಕೇಂದ್ರದಿಂದ ಹೊರಡಿಸುವ ಸೂಚನೆ, ಮಾರ್ಗಸೂಚನೆ, ಕೇಂದ್ರ ಸಿಎಸ್ಎಂಸಿ ಸಭೆಯ ನಡವಳಿಯಲ್ಲಿ ನೀಡಿರುವ ಸೂಚನೆ, ಎಸ್ಎಲ್ಇಸಿ (IHSDP) ಸೂಚನೆಗಳನ್ನು ಕಟ್ಟುನಿಟ್ಟಾಗಿ ಪಾಲಿಸುವುದರ ಜೊತೆಗೆ ಈ ಕೆಳಕಂಡ ಷರತ್ತುಗಳನ್ನು ಪಾಲಿಸಬೇಕೆಂದು ಸೂಚಿಸಲಾಗಿದೆ.

1. ಈ ಮೊತ್ತವನ್ನು ಯಾವ ಉದ್ದೇಶಕ್ಕಾಗಿ ಹಣ ಬಿಡುಗಡೆ ಮಾಡಿದೆಯೋ ಅದೇ ಉದ್ದೇಶಕ್ಕಾಗಿ ಬಳಸತಕ್ಕದ್ದು.
2. ಫಲಾನುಭವಿಗಳಿಂದ ವಂತಿಕೆಯ ನಿಯಮಿತವಾಗಿ ಪಾವತಿಯಾಗುವಂತೆ ಕ್ರಮ ವಹಿಸತಕ್ಕದ್ದು.
3. ಯೋಜನೆಯ ಅನುಷ್ಠಾನದ ಹಂತದ ಬಗ್ಗೆ ಕಾಲಕಾಲಕ್ಕೆ ವರದಿಗಳನ್ನು ರಾಜ್ಯ ಸರ್ಕಾರಕ್ಕೆ ಹಾಗೂ ಕೇಂದ್ರ ಸರ್ಕಾರಕ್ಕೆ ನೀಡತಕ್ಕದ್ದು.
4. ಈ ಆದೇಶದಲ್ಲಿ ಬಿಡುಗಡೆ ಮಾಡಲಾಗಿರುವ ಅನುದಾನದ ಬಗ್ಗೆ ಪ್ರತ್ಯೇಕ ಲೆಕ್ಕ ಇಡತಕ್ಕದ್ದು.
5. ನಿಗಧಿತ ಅವಧಿಯೊಳಗೆ ಬಳಕೆ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು.
6. ಸರ್ಕಾರದ ಉಪ ಕಾರ್ಯದರ್ಶಿ, ವಸತಿ ಇಲಾಖೆ, ಬೆಂಗಳೂರು ಇವರು ಹಣ ಬಿಡುಗಡೆ ಮಾಡುವ ಬಿಲ್ಲಿಗೆ ಮೇಲು ರುಜು ಮಾಡಲು ಅಧಿಕೃತವಾಗಿರುತ್ತಾರೆ.
7. ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ/4/ಟಿಎಫ್‌ಪಿ/2012, ಬೆಂಗಳೂರು, ದಿನಾಂಕ: 27/04/2012ರಲ್ಲಿ ತಿಳಿಸಿರುವಂತೆ ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ/4/ಟಿಎಫ್‌ಪಿ/2012, ಬೆಂಗಳೂರು, ದಿನಾಂಕ: 27/04/2012ರಲ್ಲಿ ಆರ್ಥಿಕ ಇಲಾಖೆಯವರು ಪ್ರಧಾನ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರ ಚಲಾಯಿಸಿ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ನಾಗಣ್ಣ,**

ಪೀಠಾಧಿಕಾರಿ-4,

ವಸತಿ ಇಲಾಖೆ.

**P.R. 561**

**SC - 250**

## ವಸತಿ ಸಚಿವಾಲಯ

**ವಿಷಯ :** ಕರ್ನಾಟಕ ಉಚ್ಚ ನ್ಯಾಯಾಲಯದ ರಿಟ್ ಅಪೀಲ್ ಸಂಖ್ಯೆ : 918/2008 ಮತ್ತು 1484-1485/2011 (ಜಿಎಮ್-ಸ್ಲಮ್)- ಶ್ರೀ ಬಿ.ಆರ್. ಮುರಳೀಧರ ಮತ್ತು ಇತರರು ವಿರುದ್ಧ ರಾಜ್ಯ ಸರ್ಕಾರ.

**ಓದಲಾಗಿದೆ :**

1. ಕರ್ನಾಟಕ ಉಚ್ಚ ನ್ಯಾಯಾಲಯದ ರಿಟ್ ಅಪೀಲ್ ಸಂಖ್ಯೆ : 918/2008 ಮತ್ತು 1484-1485/2011 ರಲ್ಲಿಯ ದಿನಾಂಕ : 28-8-2012ರ ತೀರ್ಪು.
2. ಪ್ರಧಾನ ಕಾರ್ಯದರ್ಶಿರವರ ಅಧ್ಯಕ್ಷತೆಯಲ್ಲಿ ದಿನಾಂಕ : 17-09-2012ರಂದು ನಡೆದ ಸಭೆಯ ನಡವಳಿ.
3. ಸರ್ಕಾರದ ಆದೇಶ ಸಂಖ್ಯೆ : ವಇ 47 ಕೊಮಂಲೆ 2012, ದಿನಾಂಕ : 21-09-2012.
4. ಅ.ಸ.ಪ.ಸಂಖ್ಯೆ : ವಇ 47 ಕೊಮಂಇ 2012, ದಿನಾಂಕ : 27-09-2012.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಕರ್ನಾಟಕ ಉಚ್ಚ ನ್ಯಾಯಾಲಯದ ರಿಟ್ ಅಪೀಲ್ ಸಂಖ್ಯೆ : 918/2008 ಮತ್ತು 1484-1485/2011 (GM-SLUM) ರಲ್ಲಿ, ಕರ್ನಾಟಕ ಉಚ್ಚ ನ್ಯಾಯಾಲಯವು ಖಾಸಗಿ ಜಮೀನುಗಳನ್ನು ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ ಕಾಯ್ದೆ ಕಲಂ 17ರ ಅಡಿಯಲ್ಲಿ ಭೂ ಸ್ವಾಧೀನ ಪಡಿಸಿಕೊಂಡ ಸಂದರ್ಭದಲ್ಲಿ ಮಂಡಳಿಯ ಕಾಯ್ದೆ ಕಲಂ 20ರ ಅಡಿಯಲ್ಲಿ ನೀಡುವ ಭೂ ಪರಿಹಾರ ಧನ ಅತಿ

ಕಡಿಮೆಯಾಗಿದೆಯೆಂದು, ದಿನಾಂಕ : 20–09–2008 ರಂದು ಉಚ್ಚ ನ್ಯಾಯಾಲಯದ ಏಕ ಸದಸ್ಯ ಪೀಠ ಕಲಂ 20ನ್ನು ಸ್ಥಗಿತಗೊಳಿಸಿರುವ ಕ್ರಮವು ಸರಿಯಿರುತ್ತದೆ ಎಂದು ಎತ್ತಿ ಹಿಡಿದಿದ್ದು, ಘನ ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು, ದಿನಾಂಕ : 28–08–2012ರಂದು ಕರ್ನಾಟಕ ಭೂ ಕಾಯಿದೆ ಸೆಕ್ಷನ್ 23 ಮತ್ತು 24ರಡಿ (Land Acquisition Act Section 23 & 24) ಭೂ ಸ್ವಾಧೀನ ಪಡಿಸಿಕೊಂಡ ಭೂ ಮಾಲೀಕರಿಗೆ ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಯು ಪರಿಹಾರ ನೀಡುವಂತೆ ತೀರ್ಪು ನೀಡಿದೆ.

ಮೇಲೆ ಓದಲಾದ ಕ್ರ. ಸಂ. (2) ದಿನಾಂಕ : 17–09–2012 ರಂದು ಪ್ರಧಾನ ಕಾರ್ಯದರ್ಶಿರವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿನ ನಡವಳಿಯಂತೆ ರಿಟ್ ಅಪೀಲ್ ಸಂಖ್ಯೆ : 918/2008 ಮತ್ತು 1484–1485/2011 (ಜಿಎಮ್–ಸ್ಲಮ್) (ಶ್ರೀ ಬಿ.ಆರ್. ಮುರಳೀಧರ ಮತ್ತು ಇತರರು) ರಲ್ಲಿ ದಿನಾಂಕ : 28–08–2012 ರಂದು ನೀಡಿದ ತೀರ್ಪಿನ ವಿರುದ್ಧ ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯ್ದೆ 1973ರ ಅಧಿನಿಯಮವನ್ನು ಸ್ಥಗಿತಗೊಳಿಸಿ (Struck Down) ನೀಡಿದ ಸರ್ಕಾರವು ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಯ ಕಾಯ್ದೆ ಕಲಂ 20ನ್ನು Restore ಮಾಡುವ ಬಗ್ಗೆ ಸರ್ವೋಚ್ಚ ನ್ಯಾಯಾಲಯದಲ್ಲಿ SLP ಫೈಲ್ ಮಾಡಲು ನಿರ್ಣಯ ಕೈಗೊಳ್ಳಲಾಯಿತು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ದಿನಾಂಕ : 17–09–2012 ರಂದು ಪ್ರಧಾನ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿಯನ್ವಯ ಘನ ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರುರವರು ನೀಡಿರುವ ತೀರ್ಪಿನ ವಿರುದ್ಧ ಭಾರತದ ಸರ್ವೋಚ್ಚ ನ್ಯಾಯಾಲಯದಲ್ಲಿ SLP ಫೈಲ್ ಮಾಡಲು, ಶ್ರೀ ವಿ.ಎನ್. ರಘುಪತಿ, ಸರ್ಕಾರಿ ವಕೀಲರು ಇವರನ್ನು ನೇಮಕ ಮಾಡಿ ಕಾನೂನು ಕೋಶದ ಮುಖ್ಯಸ್ಥರು ಹಾಗೂ ಸರ್ಕಾರದ ಉಪ ಕಾರ್ಯದರ್ಶಿ, ಇಂಧನ, ವಸತಿ, ನಗರಾಭಿವೃದ್ಧಿ, ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆರವರು ಸೂಚಿಸಿರುವಂತೆ ಸದರಿ ಪ್ರಕರಣದಲ್ಲಿ ಆದೇಶ ಹೊರಡಿಸಲಾಗಿದೆ ಹಾಗೂ ಪೀಠಾಧಿಕಾರಿ–4, ವಸತಿ ಇಲಾಖೆರವರನ್ನು ವ್ಯಾಜ್ಯ ನಿರ್ವಹಣೆ ಹಾಗೂ ಶಪಥೀಕರಿಸುವ ಅಧಿಕಾರಿಯಾಗಿ ನೇಮಕ ಮಾಡಲಾಗಿರುತ್ತದೆ.

ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ಅರೆ ಸರ್ಕಾರಿ ಪತ್ರ ದಿನಾಂಕ : 27–09–2012ರಲ್ಲಿ ಸದರಿ ಪ್ರಕರಣದಲ್ಲಿ, ಕರ್ನಾಟಕ ಉಚ್ಚ ನ್ಯಾಯಾಲಯದ ಸರ್ಕಾರಿ ವಕೀಲರನ್ನು ಹಾಗೂ ಸರ್ವೋಚ್ಚ ನ್ಯಾಯಾಲಯ, ನವದೆಹಲಿಯ ಸಂಬಂಧಪಟ್ಟ ಸರ್ಕಾರಿ ವಕೀಲರಾದ ಶ್ರೀ ವಿ.ಎನ್. ರಘುಪತಿ ಹಾಗೂ ಇತರರೊಡನೆ ವ್ಯವಹರಿಸಲು ಸದರಿ ಪ್ರಕರಣದಲ್ಲಿಯ ಮಾಹಿತಿಯನ್ನು ಬಲ್ಲವರಾಗಿದ್ದು, ಹಾಗೂ ನುರಿತಂತಹವರು ಮತ್ತು ಸದರಿ ಪ್ರಕರಣವನ್ನು ಸಮರ್ಥನೀಯವಾಗಿ ನಿಭಾಯಿಸಬೇಕಾಗಿರುವ ಹಿನ್ನೆಲೆಯಲ್ಲಿ ಸರ್ಕಾರದ ಪರವಾಗಿ (ಪೀಠಾಧಿಕಾರಿ–4, ವಸತಿ ಇಲಾಖೆ), ಲಿಟಿಗೇಷನ್ ಆಫೀಸರ್ ಆಗಿ ಶ್ರೀ ಎನ್.ಎಸ್. ರಾಯಪ್ಪ, ಕಾನೂನು ಅಧಿಕಾರಿ, ಗ್ರೇಡ್–2, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ, ಬೆಂಗಳೂರು ಇವರನ್ನು ನೇಮಕ ಮಾಡಲು ತೀರ್ಮಾನಿಸಿದೆ. ಶ್ರೀಯುತರಿಗೆ ದೆಹಲಿಗೆ ಪ್ರಯಾಣ ಮಾಡಲು ತಗಲುವ ವೆಚ್ಚ ಹಾಗೂ ಸರ್ವೋಚ್ಚ ನ್ಯಾಯಾಲಯದ ಪ್ರಕರಣದಲ್ಲಿ ಸಲ್ಲಿಸಬೇಕಾಗಿರುವ ದಾಖಲೆಗಳನ್ನು ಆಂಗ್ಲ ಭಾಷೆಗೆ ತರ್ಜುಮೆ ಮಾಡುವ ಮತ್ತಿತರ ವೆಚ್ಚಗಳನ್ನು, ನಿಯಮಾನುಸಾರ ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ ವತಿಯಿಂದ ಭರಿಸಲು ಸಹ ಅನುಮತಿ ನೀಡಲು ನಿರ್ಧರಿಸಿದೆ. ಅದಲ್ಲದೇ ಪ್ರಕರಣದಲ್ಲಿ ನೇಮಕವಾದ ಸರ್ಕಾರಿ ವಕೀಲರಿಗೆ ಬೇಕಾಗುವ ಎಲ್ಲಾ ಮಾಹಿತಿಯನ್ನು/ದಾಖಲೆಗಳನ್ನು ನೀಡಲು ಶ್ರೀ ಎನ್.ಎಸ್. ರಾಯಪ್ಪ, ಕಾನೂನು ಅಧಿಕಾರಿ, ಗ್ರೇಡ್–2, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ ಬೆಂಗಳೂರು ಇವರನ್ನು ನೇಮಿಸಲು ನಿರ್ಧರಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ವಇ 47 ಕೊಮಂಇ 2012, ಬೆಂಗಳೂರು, ದಿನಾಂಕ : 05–12–2012.**

ಪ್ರಸ್ತಾವನೆಯಲ್ಲಿ ವಿವರಿಸುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು ರಿಟ್ ಅಪೀಲ್ ಸಂಖ್ಯೆ : 918/2008 ಮತ್ತು 1484–1485/2011 (ಜಿಎಮ್–ಸ್ಲಮ್) ದಲ್ಲಿ ಘನ ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು ದಿನಾಂಕ : 28–8–2012 ರಂದು ನೀಡಿದ ತೀರ್ಪಿನ ವಿರುದ್ಧ ಭಾರತದ ಸರ್ವೋಚ್ಚ ನ್ಯಾಯಾಲಯ, ನವದೆಹಲಿ ಎಲ್ಲಿ ಎಸ್.ಎಲ್.ಪಿ. (SLP) ಸಲ್ಲಿಸುವ ಸಂಬಂಧವಾಗಿ ಕರ್ನಾಟಕ ಉಚ್ಚ ನ್ಯಾಯಾಲಯದ ಸರ್ಕಾರಿ ವಕೀಲರನ್ನು ಹಾಗೂ ಸರ್ವೋಚ್ಚ ನ್ಯಾಯಾಲಯ, ನವದೆಹಲಿಯ ಸಂಬಂಧಪಟ್ಟ ಸರ್ಕಾರಿ ವಕೀಲರಾದ ಶ್ರೀ ವಿ.ಎನ್. ರಘುಪತಿ ಹಾಗೂ ಇತರರೊಡನೆ ವ್ಯವಹರಿಸಲು ಸದರಿ ಪ್ರಕರಣದಲ್ಲಿ ನುರಿತಂತಹ ಮತ್ತು ಸಮರ್ಥನೀಯವಾಗಿ ನಿಭಾಯಿಸುವಂತವರಾದ ಶ್ರೀ ಎನ್.ಎಸ್. ರಾಯಪ್ಪ, ಕಾನೂನು ಅಧಿಕಾರಿ, ಗ್ರೇಡ್–2, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ, ಬೆಂಗಳೂರು ಇವರನ್ನು ಸರ್ಕಾರದ ಪರವಾಗಿ (ಪೀಠಾಧಿಕಾರಿ–4, ವಸತಿ ಇಲಾಖೆ) ಲಿಟಿಗೇಷನ್ ಆಫೀಸರ್ ಆಗಿ ನೇಮಕ ಮಾಡಲಾಗಿದೆ.

ಶ್ರೀ ಎನ್.ಎಸ್. ರಾಯಪ್ಪ, ಕಾನೂನು ಅಧಿಕಾರಿ, ಗ್ರೇಡ್–2, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ, ಬೆಂಗಳೂರು ಇವರು ಸದರಿ ಪ್ರಕರಣದಲ್ಲಿ ದೆಹಲಿಗೆ ವಿಮಾನದ ಮೂಲಕ ಪ್ರಯಾಣ ಮಾಡಲು ನಿಯಮಾನುಸಾರ ಪ್ರಯಾಣ ಭತ್ಯೆ, ದಿನಭತ್ಯೆ ಮತ್ತು ಸದರಿ ಪ್ರಕರಣದಲ್ಲಿ ಸವೋಚ್ಚ ನ್ಯಾಯಾಲಯಕ್ಕೆ ನೀಡಬೇಕಾದ ದಾಖಲೆಗಳನ್ನು ಕನ್ನಡ ಭಾಷೆಯಿಂದ ಆಂಗ್ಲ ಭಾಷೆಗೆ ತರ್ಜುಮೆ ಮಾಡುವ ಮತ್ತಿತರ ಖರ್ಚು ವೆಚ್ಚಗಳನ್ನು ನಿಯಮಾನುಸಾರ ಮಂಡಳಿ ವತಿಯಿಂದ ಭರಿಸಲು ಸಹ ಅನುಮತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ನಾಗಣ್ಣ**

ಪೀಠಾಧಿಕಾರಿ–4,

ವಸತಿ ಇಲಾಖೆ.

**P.R. 562**

**SC - 100**

**ಒಳಾಡಳಿತ ಸಚಿವಾಲಯ**

**ವಿಷಯ:** ಕಾನೂನು ಬಾಹಿರ ಚಟುವಟಿಕೆಗಳ ತಡೆಗಟ್ಟುವಿಕೆ ನ್ಯಾಯಮಂಡಳಿಯ ಮುಂದೆ ದೀಂದರ್ ಅಂಜುಮಾನ್ ಸಲ್ಲಿಸಿರುವ ಪುನರ್ ಪರಿಶೀಲನಾ ಅರ್ಜಿ ಸಂಖ್ಯೆ:: 01/2012ರ ವಿರುದ್ಧ ರಾಜ್ಯ ಸರ್ಕಾರದ ಪರವಾಗಿ ವಾದಿಸಿರುವ ಶ್ರೀ ಹೆಚ್.ಎನ್. ನಿಲೋಗಲ್, ವಕೀಲರು, ಬೆಂಗಳೂರು ಇವರಿಗೆ ಸಂಭಾವನೆ ನಿಗಧಿಪಡಿಸುವ ಬಗ್ಗೆ.

**ಓದಲಾಗಿದೆ:** 1) ದಿನಾಂಕ: 08/01/2013ರ ಸರ್ಕಾರದ ಅಧಿಸೂಚನೆ ಸಂಖ್ಯೆ:ಹೆಚ್‌ಡಿ 02 ಎಸ್‌ಎಸ್‌ಟಿ 2013

2) 1ನೇ ಅಪರ ವಾದೇಕ್ಷಕರು ಹಾಗೂ ಪದನಿಮಿತ್ತ ಸರ್ಕಾರದ ಉಪಕಾರ್ಯದರ್ಶಿ, ಒಳಾಡಳಿತ ಇಲಾಖೆ ಇವರ ದಿನಾಂಕ: 08/03/2013ರ ಅನಧಿಕೃತ ಟಿಪ್ಪಣಿ ಸಂ:ಜಹೆಚ್‌ಡಿ 983 ಹೆಚ್‌ಸಿಪಿ–2/2013ರೊಂದಿಗೆ ಲಗತ್ತಿಸಿರುವ ದಿನಾಂಕ: 04/03/2013ರ ಸರ್ಕಾರದ ನಡಾವಳಿಗಳು.

3) ದಿನಾಂಕ: 12/04/2013ರ ಪತ್ರ ಸಂಖ್ಯೆ ಲೆಕ್ಕ–2/80/2012–13 ಮಹಾನಿರ್ದೇಶಕರು ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು.

**ಪ್ರಸ್ತಾವನೆ**

ಮೇಲೆ (1)ರಲ್ಲಿ ಓದಲಾದ ದಿನಾಂಕ: 08/01/2013ರ ಸರ್ಕಾರದ ಅಧಿಸೂಚನೆಯಲ್ಲಿ ದೀಂದರ್ ಅಂಜುಮನ್ ಸಲ್ಲಿಸಿರುವ ಪುನರ್ ಪರಿಶೀಲನಾ ಅರ್ಜಿ ವಿರುದ್ಧ ಸರ್ಕಾರದ ಪರವಾಗಿ ವಾದಿಸಲು ಶ್ರೀ ಹೆಚ್.ಎನ್. ನಿಲೋಗಲ್, ವಕೀಲರು, ಬೆಂಗಳೂರು ಇವರನ್ನು ವಿಶೇಷ ಅಭಿಯೋಜಕರಾಗಿ ನೇಮಿಸಲಾಗಿದೆ. ಮೇಲೆ (2)ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಸಂಭಾವನಾ ನಿಗದಿ ಸಮಿತಿಯು ಶ್ರೀ ಹೆಚ್.ಎನ್. ನಿಲೋಗಲ್, ವಕೀಲರು ಬೆಂಗಳೂರು ಇವರಿಗೆ ಸದರಿ ಪ್ರಕರಣದಲ್ಲಿ ಸಂಭಾವನೆಯನ್ನು ನಿಗದಿಪಡಿಸಿದೆ. ಮುಂದುವರೆದು, ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ಶ್ರೀ ಹೆಚ್.ಎನ್. ನಿಲೋಗಲ್, ವಕೀಲರು ಇವರು ದಿನಾಂಕ:08–02–2013ರಂದು ದೆಹಲಿಗೆ ಪ್ರಯಾಣಿಸಿ ದಿನಾಂಕ: 10–02–2013ರಂದು ಬೆಂಗಳೂರಿಗೆ ವಿಮಾನದಲ್ಲಿ ಪ್ರಯಾಣಿಸಿದ ಪ್ರಯುಕ್ತ ₹20,330/–ಗಳನ್ನು ಪಾವತಿಸುವಂತೆ ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾನಿರೀಕ್ಷಕರು ಕೋರಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 02 ಎಸ್‌ಎಸ್‌ಟಿ 2013, ಬೆಂಗಳೂರು ದಿನಾಂಕ: 07–05–2013**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಹೆಚ್.ಎನ್. ನಿಲೋಗಲ್, ವಕೀಲರು, ಬೆಂಗಳೂರು, ಇವರು ಕಾನೂನುಬಾಹಿರ ಚಟುವಟಿಕೆಗಳು (ತಡೆಗಟ್ಟುವಿಕೆ) ನ್ಯಾಯಮಂಡಳಿಯ ಮುಂದೆ ದೀಂದರ್ ಅಂಜುಮನ್ ಸಲ್ಲಿಸಿರುವ ಪುನರ್ ಪರಿಶೀಲನಾ ಅರ್ಜಿ ವಿರುದ್ಧ ರಾಜ್ಯ ಸರ್ಕಾರದ ಪರವಾಗಿ ವಿಶೇಷ ಅಭಿಯೋಜಕರಾಗಿ ಕರ್ತವ್ಯ ನಿರ್ವಹಿಸಿದ್ದಕ್ಕಾಗಿ ಈ ಕೆಳಕಂಡಂತೆ ಸಂಭಾವನೆಯನ್ನು ಮಂಜೂರು ಮಾಡಲಾಗಿದೆ.

| ಕ್ರ. ಸಂ. | ಸಂಭಾವನೆಯ ವಿವರ | ಮೊತ್ತ |
|---|---|---|
| 1 | Reading Fee | ₹. 30,000-00 |
| 2 | Effective hearing per day | ₹. 3,000-00 |
| 3 | Non-effective hearing per day | ₹. 500-00 |
| 4 | Miscellaneous expenses (Typing, Xerox etc) | ₹. 5,000-00 |

ಶ್ರೀ ಹೆಚ್.ಎನ್. ನಿಲೋಗಲ್, ವಕೀಲರು ಇವರು ದಿನಾಂಕ:08–02–2013ರಂದು ದೆಹಲಿಗೆ ಪ್ರಯಾಣಿಸಿ ದಿನಾಂಕ: 10–02–2013ರಂದು ಬೆಂಗಳೂರಿಗೆ ವಿಮಾನದಲ್ಲಿ ಪ್ರಯಾಣಿಸಿದ ಪ್ರಯುಕ್ತ ₹. 20,330/– (ರೂ. ಇಪ್ಪತ್ತು ಸಾವಿರದ ಮುನ್ನೂರ ಮೂವತ್ತು ಮಾತ್ರ)ಗಳನ್ನು ಪಾವತಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ. ಜೊತೆಗೆ ಇನ್ನು ಮುಂದೆ ಪ್ರಸ್ತಾಪಿಸಿದ ಅಧಿಕೃತ ಕೆಲಸದ ನಿಮಿತ್ತ ಅವರ ಪರ ಊರಿಗೆ ತೆರಳಿದಾಗ ಅವರಿಗೆ ರಾಜ್ಯ ಸರ್ಕಾರದ ಗ್ರೂಪ್ "ಎ" ಅಧಿಕಾರಿಗೆ ನೀಡುವ ಪ್ರಯಾಣದ ವೆಚ್ಚ, ದಿನಭತ್ಯೆ ಹಾಗೂ ವಾಸಸ್ಥಳದಿಂದ ರೈಲು/ಬಸ್/ವಿಮಾನ ನಿಲ್ದಾಣಕ್ಕೆ ಅಥವಾ ಅಲ್ಲಿಂದ ವಾಸಸ್ಥಳಕ್ಕೆ ವಾಪಸ್ಸು ಬರಲು ಉಪಯೋಗಿಸಿದ ವಾಹನ ವೆಚ್ಚ auto/taxi/bus charges) ಗಳನ್ನು ಪಡೆಯಲು ಅವರು ಅರ್ಹರಿರುತ್ತಾರೆ.

ಸದರಿ ವೆಚ್ಚವನ್ನು "ಲೆಕ್ಕ ಶೀರ್ಷಿಕೆ 2014, Administration of Justice-114, Legal Advisors and Counsels-01, Advocate General, Payment for Professional and Special Services in the Budget" ರಡಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಆಇ 3 ಟಿಎಫ್‌ಪಿ 2011, ದಿನಾಂಕ:27–01–2012ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳಿಗೆ ಅಧಿಕಾರ ಪ್ರತ್ಯಾಯೋಜಿಸಿದ ರೀತ್ಯಾ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಪ್ರಕಾಶ್ ವೈ.ಕೆ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಕಾನೂನು ಮತ್ತು ಸುವ್ಯವಸ್ಥೆ)

**P.R. 556**

**SC - 50**

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ರಾಜೀವ್ ಮಾಂಗ್, ಪ್ರೊ.ಡಿವೈ.ಎಸ್‌ಪಿ ರವರ ಹೆಸರು ಬದಲಾವಣೆ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಅಧಿಸೂಚನೆ ಸಂಖ್ಯೆ:ಒಇ 165 ಪೊಸಿಪ 2010 ದಿನಾಂಕ: 26–06–2010.

2) ಪೊಲೀಸ್ ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ರವರ ಕಚೇರಿ ಪತ್ರ ಸಂಖ್ಯೆ: ಸಿಬಿ–4/130/2011–12 ದಿನಾಂಕ: 21–02–2012.

**ಪ್ರಸ್ತಾವನೆ**

ಮೇಲೆ ಓದಲಾದ (1)ರ ಅಧಿಸೂಚನೆಯಲ್ಲಿ ಶ್ರೀ ರಾಜೀವ್ ಮಾಂಗ್, ಮೊರಬ, ರಾಯಬಾಗ ತಾಲ್ಲೂಕು ಬೆಳಗಾವಿ ಜಿಲ್ಲೆ ಇವರನ್ನು ಪ್ರೊ. ಡೆಪ್ಯೂಟಿ ಸೂಪರಿಂಟೆಂಡೆಂಟ್ ಆಫ್ ಪೊಲೀಸ್ ಹುದ್ದೆ ಪರಿವೀಕ್ಷಣೆ ಮೇಲೆ ನೇಮಕ ಮಾಡಲಾಗಿತ್ತು. ಮೇಲೆ ಓದಲಾದ (2)ರ ಪತ್ರದಲ್ಲಿ ಡಿಜಿ ಮತ್ತು

ಐಜಿಪಿ ರವರು ಶ್ರೀ ರಾಜೀವ್ ಮಾಂಗ್, ಪ್ರೊ.ಡಿವೈ.ಎಸ್.ಪಿ, ಉಡುಪಿ ರವರು ತಮ್ಮ ಹೆಸರು ರಾಜೀವ್ ಮಾಂಗ್, ಎಂಬುದರ ಬದಲಾಗಿ ರಾಜೀವ್ ಎಂ. ಎಂದು ಹೆಸರನ್ನು ಬದಲಾವಣೆ ಮಾಡಲು ಇಚ್ಛಿಸಿರುವುದಾಗಿಯೂ ಹಾಗೂ ತಮ್ಮ ಹೆಸರನ್ನು ಬದಲಾಯಿಸಲು ಕಾರಣಗಳನ್ನು ನಮೂದಿಸಿ ವಿಳಾಶ ಮತ್ತು ಸ್ಥಿರಾಸ್ಥಿ ಹೊಂದಿರುವ ವಿವರಗಳನ್ನು ಹಾಗೂ ಖಜಾನೆಗೆ ರೂ. 100-00ನ್ನು ಸಂದಾಯ ಮಾಡಿರುವ ರಸೀತಿಯನ್ನು ಸಲ್ಲಿಸುತ್ತಾ ತಮ್ಮ ಹೆಸರನ್ನು ಬದಲಾಯಿಸಲು ಅನುಮತಿ ನೀಡುವಂತೆ ಕೋರಿದ್ದು ಕರ್ನಾಟಕ ಸರ್ಕಾರ ನೌಕರರ (ಹೆಸರು ಬದಲಾವಣೆ ಕುರಿತು ಕಾರ್ಯ ವಿಧಾನ) ನಿಯಮಗಳು, 1967ಲ್ಲಿ ಸೂಚಿಸಿರುವಂತೆ ಸದರಿ ಪ್ರಸ್ತಾವನೆಯನ್ನು ಸಲ್ಲಿಸಲಾಗಿದ್ದು ಶ್ರೀ ರಾಜೀವ್ ಮಾಂಗ್ ರವರು ತಮ್ಮ ಹೆಸರನ್ನು ರಾಜೀವ್ ಎಂ ಎಂದು ಬದಲಾಯಿಸಲು ಅನುಮತಿಯನ್ನು ನೀಡುವಂತೆ ಡಿಜಿ ಮತ್ತು ಐಜಿಪಿ ರವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಒಇ 484 ಪೊಸಿಪ 2011, ಬೆಂಗಳೂರು ದಿನಾಂಕ: 27-02-2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ ಕರ್ನಾಟಕ ಸರ್ಕಾರ ನೌಕರರ (ಹೆಸರು ಬದಲಾವಣೆ ಕುರಿತು ಕಾರ್ಯ ವಿಧಾನ) ನಿಯಮಗಳು, 1967ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ರಾಜೀವ್ ಮಾಂಗ್, ಪ್ರೊ.ಡಿವೈ.ಎಸ್.ಪಿ, ಉಡುಪಿ ಇವರು ತಮ್ಮ ಹೆಸರನ್ನು ರಾಜೀವ್ ಎಂ ಎಂದು ಬದಲಾಯಿಸಿಕೊಳ್ಳಲು ಸರ್ಕಾರವು ಅನುಮತಿಯನ್ನು ನೀಡಿದೆ.

ಈ ಆದೇಶದ ಪ್ರತಿಯನ್ನು ಸದರಿ ಅಧಿಕಾರಿಯ ಸೇವಾ ಪುಸ್ತಕದಲ್ಲಿ ಅಂಟಿಸಿ ದಾಖಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಎನ್. ರವಿಪ್ರಕಾಶ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು-ಎ)

**P.R. 554**

## ವಸತಿ ಸಚಿವಾಲಯ

**ವಿಷಯ:** 2012-2013ನೇ ಸಾಲಿನಲ್ಲಿ ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಗೆ ಮೂರನೇ ತ್ರೈಮಾಸಿಕ ಕಂತಿನ ಅನುದಾನ ಬಿಡುಗಡೆ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ : ವಇ 29 ಕೊಮಂಲೆ 2012, ದಿನಾಂಕ 21-06-2012 ಮತ್ತು 14-09-2012.
2. ಸರ್ಕಾರದ ಆದೇಶ ಸಂಖ್ಯೆ : ವಇ 15 ಕೊಮಂಲೆ 2012, ದಿನಾಂಕ 11-06-2012.
3. ಆಯುಕ್ತರು, ಕ ಕೊ ಆ ಮ, ಬೆಂಗಳೂರು ಇವರ ಪತ್ರ ಸಂಖ್ಯೆ : ಕಕೊಆಮ/ಲೆಪಶಾ/ ಅನುದಾನ/2012-13, ದಿನಾಂಕ 20-10-2012
4. ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ/4/ಟಿಎಫ್‌ಪಿ/2012, ಬೆಂಗಳೂರು, ದಿನಾಂಕ 27.04.2012.
5. ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ/8/ಟಿಎಫ್‌ಪಿ/2012, ಬೆಂಗಳೂರು, ದಿನಾಂಕ 04.10.2012.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಸರ್ಕಾರದ ಆದೇಶಗಳಲ್ಲಿ 2012-13ನೇ ಸಾಲಿನ ಮೊದಲನೇ ಹಾಗೂ ಎರಡನೇ ತ್ರೈಮಾಸಿಕ ಕಂತಿನ ಅನುದಾನ ಸಿಬ್ಬಂದಿ ವೆಚ್ಚಕ್ಕೆ (ಯೋಜನೆ ಮತ್ತು ಯೋಜನೇತರಡಿ) ರೂ. 746.34 ಲಕ್ಷಗಳು, ಕೊಳಚೆ ಸುಧಾರಣೆ - ಸಹಾಯಧನ- ಯೋಜನೆಯಡಿ ರೂ.1976.00 ಲಕ್ಷಗಳನ್ನು ಹಾಗೂ ಹುಡ್ಕೋ ಸಾಲಗಳ ಮೇಲು ಉಸ್ತುವಾರಿ - ಯೋಜನೇತರಡಿಯಲ್ಲಿ ರೂ. 638.61 ಲಕ್ಷಗಳು (ಹುಡ್ಕೋ ಸಂಸ್ಥೆಯ ಬೇಡಿಕೆಯನ್ವಯ) ಒಟ್ಟು ಯೋಜನೆಯಡಿ ರೂ. 2221.00 ಲಕ್ಷಗಳು ಹಾಗೂ ಯೋಜನೇತರಡಿಯಲ್ಲಿ ರೂ. 1109.95 ಲಕ್ಷಗಳು ಒಟ್ಟು ರೂ. 3330.95 ಲಕ್ಷಗಳನ್ನು ಬಿಡುಗಡೆ ಮಾಡಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರಲ್ಲಿ ಬೆಂಗಳೂರು ಮತ್ತು ಮೈಸೂರು ನಗರಗಳಲ್ಲಿ JnNURM-BSUP ಯೋಜನೆಯಡಿ ಪ್ರಾರಂಭಿಸದೇ ಇರುವ 4742 ಮನೆಗಳಿಗೆ ಹೆಚ್ಚುವರಿ ಅನುದಾನಗಳ ಪೈಕಿ ವಸತಿ ಇಲಾಖೆಯ ಶೇಕಡ 50 ರಷ್ಟು ಅನುದಾನ ರೂ. 1804.00 ಲಕ್ಷಗಳನ್ನು ಕೊಳಚೆ ಸುಧಾರಣೆ - ಸಹಾಯಧನ- ಯೋಜನೆಯಡಿ ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಗೆ ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರಲ್ಲಿ, ಆಯುಕ್ತರು, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ ರವರ ಪತ್ರದಲ್ಲಿ 2012-13 ನೇ ಸಾಲಿನ ಮೂರನೇ ತ್ರೈಮಾಸಿಕ ಕಂತಿನ ಅನುದಾನ ಸಿಬ್ಬಂದಿ ವೆಚ್ಚಕ್ಕೆ (ಯೋಜನೆ ಮತ್ತು ಯೋಜನೇತರಡಿ) ರೂ. 373.17 ಲಕ್ಷಗಳು, ಕೊಳಚೆ ಸುಧಾರಣೆ - ಸಹಾಯಧನ- ಯೋಜನೆಯಡಿ ರೂ. 1875.00 ಲಕ್ಷಗಳನ್ನು ಹಾಗೂ ಹುಡ್ಕೋ ಸಾಲಗಳ ಮೇಲು ಉಸ್ತುವಾರಿ - ಯೋಜನೇತರಡಿಯಲ್ಲಿ ರೂ. 308.26 ಲಕ್ಷಗಳು (ಹುಡ್ಕೋ ಸಂಸ್ಥೆಯ ಬೇಡಿಕೆಯನ್ವಯ) ಒಟ್ಟು ಯೋಜನೆಯಡಿ ರೂ. 2012.50 ಲಕ್ಷಗಳು ಹಾಗೂ ಯೋಜನೇತರಡಿಯಲ್ಲಿ ರೂ. 543.93 ಲಕ್ಷಗಳು ಒಟ್ಟು ರೂ. 2556.43 ಲಕ್ಷಗಳನ್ನು ಮಂಡಳಿಗೆ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4) ಮತ್ತು (5) ರ ಆರ್ಥಿಕ ಇಲಾಖೆಯ ಆದೇಶಗಳಲ್ಲಿ ಸಿಬ್ಬಂದಿ ವೆಚ್ಚಗಳಿಗೆ ಆಯವ್ಯಯದಲ್ಲಿ ಒದಗಿಸಲಾದ ಮೊತ್ತದವರೆಗೆ ಆರ್ಥಿಕ ಇಲಾಖೆಯ ಅನುಮತಿ ಇದೆಯೆಂದು ಭಾವಿಸಿ ಹಣವನ್ನು ಬಿಡುಗಡೆ ಮಾಡಬಹುದಾಗಿದೆ. ಹಾಗೂ ರೂ. 5.00 ಕೋಟಿ ಮತ್ತು ಮೇಲ್ಪಟ್ಟು ಆಯವ್ಯಯದಲ್ಲಿ ಅವಕಾಶವಿರುವ ಇತರೆ ಎಲ್ಲಾ ಯೋಜನೆಗಳಿಗೆ ಪ್ರಸಕ್ತ ಆಯವ್ಯಯದ ಮೊದಲ ಒಂಬತ್ತು ಮಾಹೆಯ ಅನುದಾನವನ್ನು ಬಿಡುಗಡೆ ಮಾಡಬಹುದಾಗಿದೆ. ಹಾಗೂ ಆಯವ್ಯಯದಲ್ಲಿ ಹಣದ ಲಭ್ಯತೆಗೆ ಒಳಪಟ್ಟು ಸಾಲಗಳ ನಿಬಂಧನೆಗಳು ಮತ್ತು ಷರತ್ತುಗಳಿಗೆ ಅನುಗುಣವಾಗಿ ಸಾಲ ಪಾವತಿಗಾಗಿ ಹಣವನ್ನು ಒಂದು ಆರ್ಥಿಕ ವರ್ಷದ 3ನೇ ತ್ರೈಮಾಸಿಕದವರೆಗೂ ಆರ್ಥಿಕ ಇಲಾಖೆಯ ಅನುಮತಿ ಇದೆಯೆಂದು ಭಾವಿಸಿ ಬಿಡುಗಡೆ ಮಾಡಬಹುದಾಗಿದೆ.

ಸರ್ಕಾರವು, ಆಯುಕ್ತರು, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಯವರ ಪ್ರಸ್ತಾವನೆಯನ್ನು ಪರಿಶೀಲಿಸಿ ಹಾಗೂ ಆರ್ಥಿಕ ಇಲಾಖೆಯ ಆದೇಶದನ್ವಯ ವಿವಿಧ ಲೆಕ್ಕಶೀರ್ಷಿಕೆಗಳಡಿ ಮೂರನೇ ತ್ರೈಮಾಸಿಕ ಕಂತಾಗಿ ಅನುದಾನವನ್ನು ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಗೆ ಬಿಡುಗಡೆ ಮಾಡಲು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ವಇ 29 ಕೊಮಂಲೆ 2012, ಬೆಂಗಳೂರು, ದಿನಾಂಕ : 16ನೇ ನವೆಂಬರ್ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಗೆ 2012-13ನೇ ಸಾಲಿನ ಮೂರನೇ ತ್ರೈಮಾಸಿಕ ಕಂತಾಗಿ ಅನುದಾನವನ್ನು ಈ ಕೆಳಕಂಡ ಲೆಕ್ಕಶೀರ್ಷಿಕೆಗಳಾದ ಸಿಬ್ಬಂದಿ ವೆಚ್ಚ (ಯೋಜನೆ ಮತ್ತು ಯೋಜನೇತರ) ಕೊಳಚೆ ಸುಧಾರಣೆ – ಸಹಾಯಧನ– (ಯೋಜನೆ), ಹಾಗೂ ಹುಡ್ಕೋ ಸಾಲಗಳ ಮೇಲು ಉಸ್ತುವಾರಿ (ಯೋಜನೇತರ) ಗಾಗಿ ಒಟ್ಟು ರೂ. 2556.43 ಲಕ್ಷಗಳು (ಇಪ್ಪತ್ತೈದು ಕೋಟಿ ಐವತ್ತಾರು ಲಕ್ಷದ ನಲವತ್ತ ಮೂರು ಸಾವಿರ ರೂಪಾಯಿಗಳು ಮಾತ್ರ) ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಗೆ ಈ ಅನುದಾನವನ್ನು ಕೆಳಕಂಡ ನಿಬಂಧನೆಗಳನ್ನು ಕಟ್ಟು ನಿಟ್ಟಾಗಿ ಪಾಲಿಸುವ ಷರತ್ತಿನೊಂದಿಗೆ ಬಿಡುಗಡೆ ಮಾಡಿ ಆದೇಶಿಸಿದೆ.

(ರೂ. ಲಕ್ಷಗಳಲ್ಲಿ)

| ಕ್ರಮ ಸಂಖ್ಯೆ | ಲೆಕ್ಕ ಶೀರ್ಷಿಕೆ | ಮೂರನೇ ತ್ರೈಮಾಸಿಕ | | |
|---|---|---|---|---|
| | | ಯೋಜನೆ | ಯೋಜನೇತರ | ಒಟ್ಟು |
| 1 | ಸಿಬ್ಬಂದಿ ವೆಚ್ಚ<br>2217-04-191-2-01-101 | 137.50 | 235.67 | 373.17 |
| 1 | ಕೊಳಚೆ ಸುಧಾರಣೆ – ಸಹಾಯಧನ<br>2217-04-191-2-02-106 | 1875.00 | 0.00 | 1875.00 |
| 2 | ಹುಡ್ಕೋ ಸಾಲಗಳ ಮೇಲು ಉಸ್ತುವಾರಿ<br>2217-04-191-2-04-240 | 0.00 | 308.26 | 308.26 |
| | **ಒಟ್ಟು** | **2012.50** | **543.93** | **2556.43** |

**ನಿಬಂಧನೆಗಳು :**

1. ಸರ್ಕಾರದ ಉಪ ಕಾರ್ಯದರ್ಶಿ, ವಸತಿ ಇಲಾಖೆ, ಬೆಂಗಳೂರು ಇವರು ಹಣ ಬಿಡುಗಡೆ ಮಾಡುವ ಬಿಲ್ಲಿಗೆ ಮೇಲು ರುಜು ಮಾಡಲು ಅಧಿಕೃತವಾಗಿರುತ್ತಾರೆ.
2. ಈ ಆದೇಶದಲ್ಲಿ ಬಿಡುಗಡೆ ಮಾಡಲಾಗಿರುವ ಅನುದಾನದ ಬಗ್ಗೆ ಪ್ರತ್ಯೇಕ ಲೆಕ್ಕ ಇಡತಕ್ಕದ್ದು.
3. ಯಾವ ಉದ್ದೇಶಕ್ಕಾಗಿ ಹಣ ಬಿಡುಗಡೆ ಮಾಡಿದೆಯೋ ಅದೇ ಉದ್ದೇಶಕ್ಕಾಗಿ ಬಳಸತಕ್ಕದ್ದು.
4. ಪ್ರಸಕ್ತ ಸಾಲಿನಲ್ಲಿ ಬಿಡುಗಡೆ ಮಾಡಿದ ಹಣಕಾಸಿನ ಮೊತ್ತಕ್ಕೆ ಬಳಕೆ ಪ್ರಮಾಣಪತ್ರವನ್ನು ಮಹಾಲೇಖಪಾಲಕರು, ಕರ್ನಾಟಕ, ಬೆಂಗಳೂರು ಇವರಿಗೆ ಕಳುಹಿಸಿ ಅದರ ಪ್ರತಿಯನ್ನು ಸರ್ಕಾರಕ್ಕೆ ಕಳುಹಿಸುವುದು.
5. ಆರ್ಥಿಕ ಇಲಾಖೆ ಆದೇಶ ಸಂಖ್ಯೆ : ಎಫ್‌ಡಿ 4/ಟಿಎಫ್‌ಪಿ/12, ದಿನಾಂಕ 27-04-2012 ಹಾಗೂ ಎಫ್‌ಡಿ/8/ ಟಿಎಫ್‌ಪಿ/2012, ದಿನಾಂಕ 04-10-12 ಆದೇಶಗಳಲ್ಲಿ ತಿಳಿಸಿರುವಂತೆ ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 4/ಟಿಎಫ್‌ಪಿ/2012, ದಿನಾಂಕ 27-04-2012 ಹಾಗೂ ಸಂಖ್ಯೆ : ಎಫ್‌ಡಿ 8/ ಟಿಎಫ್‌ಪಿ/2012, ಬೆಂಗಳೂರು, ದಿನಾಂಕ 04-10-2012 ಆದೇಶಗಳಲ್ಲಿ ಆರ್ಥಿಕ ಇಲಾಖೆಯವರು ಪ್ರಧಾನ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರ ಚಲಾಯಿಸಿ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ನಾಗಣ್ಣ,**

ಪೀಠಾಧಿಕಾರಿ-4,

ವಸತಿ ಇಲಾಖೆ.

**P.R. 559**

**SC- 250**

## ತೋಟಗಾರಿಕೆ ಸಚಿವಾಲಯ

**ವಿಷಯ:** ಶ್ರೀ ಎಂ.ಪಿ. ಕಿಚಡಿ, ರೇಷ್ಮೆ ಪ್ರವರ್ತಕರು ಇವರ ಅನಧಿಕೃತ ಗೈರು ಹಾಜರಿ ಅವಧಿಯನ್ನು ಕರ್ತವ್ಯವಲ್ಲದ ಅವಧಿ (Dies non) ಎಂದು ಪರಿಗಣಿಸಿ, ಪರೀಕ್ಷಾ ಪೂರ್ವ ಅವಧಿಯನ್ನು ವಿಸ್ತರಿಸುವ ಬಗ್ಗೆ

**ಓದಲಾಗಿದೆ:** ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಇವರ ಪತ್ರ ಸಂಖ್ಯೆ: ಸಿ1(5)/ರೇಪ್ರವ/ ಪಪೂಅ/33/2006-07, ದಿನಾಂಕ: 16-04-2012, 19-03-2013

**ಪ್ರಸ್ತಾವನೆ:**

ಶ್ರೀ ಎಂ. ಪಿ. ಕಿಚಡಿ ಇವರು ದಿನಾಂಕ: 08-02-1985 ರಂದು ರೇಷ್ಮೆ ಪ್ರವರ್ತಕರ ಹುದ್ದೆಗೆ ಕಾರ್ಯವರದಿ ಮಾಡಿಕೊಂಡಿರುತ್ತಾರೆ. ಇವರು ನಿಗದಿತ ಅವಧಿಯಲ್ಲಿ ಇಲಾಖಾ ಪರೀಕ್ಷೆಯನ್ನು ಪಾಸು ಮಾಡಿಕೊಂಡು ಕರ್ತವ್ಯ ನಿರ್ವಹಿಸಿದ್ದಲ್ಲಿ ಇವರ ಪರಿವೀಕ್ಷಣಾ ಅವಧಿಯನ್ನು

ದಿನಾಂಕ: 07–02–1987ಕ್ಕೆ ಘೋಷಣೆ ಮಾಡಬೇಕಾಗಿತ್ತು. ಆದರೆ, ಈ ಅವಧಿಯಲ್ಲಿ ಅವರು ನಿಗದಿಪಡಿಸಿರುವ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗಿರುವುದಿಲ್ಲ ಹಾಗೂ ಈ ನೌಕರರು ಪರಿವೀಕ್ಷಣಾ ಅವಧಿಯಲ್ಲಿರುವಾಗಲೇ 554 ದಿನಗಳ ಅವಧಿಗೆ ಗೈರು ಹಾಜರಾಗಿರುತ್ತಾರೆ. ಈ ಅವಧಿಯನ್ನು ಲೆಕ್ಕಕ್ಕಿಲ್ಲದ ಅವಧಿಯೆಂದು (Dies non) ಪರಿಗಣಿಸಿ ಸಕ್ರಮಗೊಳಿಸುವಂತೆ ಹಾಗೂ ನೌಕರರು ಇಲಾಖಾ ಪರೀಕ್ಷೆಯನ್ನು ದಿನಾಂಕ: 20–04–1989ರಂದು ಪಾಸು ಮಾಡಿಕೊಂಡಿದ್ದು, ನೌಕರರ ಪರಿವೀಕ್ಷಣಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ಪರಿವೀಕ್ಷಣಾ ನಿಯಮಗಳು 1977ರ ನಿಯಮ 4(1) (ii) ರನ್ವಯ ದಿನಾಂಕ: 08–02–1987 ರಿಂದ 07–02–1988 ರವರೆಗೆ ವಿಸ್ತರಿಸಿ ಆದೇಶಿಸಲಾಗಿದ್ದು ಹಾಗೂ ದಿನಾಂಕ: 08–02–1988 ರಿಂದ 11–02–2002 ರವರೆಗೆ ಪರೀಕ್ಷಾರ್ಥ ಅವಧಿ ಘೋಷಣೆಯಾಗಬೇಕಿದ್ದು, ನೌಕರರು ಅನಧಿಕೃತವಾಗಿ ಗೈರು ಹಾಜರಾಗಿರುವ 554 ದಿನಗಳನ್ನು ಮುಂದೂಡಿ, ಪರೀಕ್ಷಾರ್ಥ ಅವಧಿಯನ್ನು ವಿಸ್ತರಿಸುವಂತೆ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಮೇಲೆ ಓದಲಾದ ಪತ್ರಗಳಲ್ಲಿ ಕೋರಿರುತ್ತಾರೆ.

ಶ್ರೀ ಎಂ.ಪಿ. ಕಿಚಡಿ, ರೇಷ್ಮೆ ಪ್ರವರ್ತಕರು ಪರಿವೀಕ್ಷಣಾ ಅವಧಿಯಲ್ಲಿದ್ದು, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 114(8) ರನ್ವಯ ತಾತ್ಕಾಲಿಕ ನೌಕರರಾಗಿರುತ್ತಾರೆ. ಸದರಿಯವರ ಪರಿವೀಕ್ಷಣಾ ಅವಧಿಯಲ್ಲಿ ಒಟ್ಟು 554 ದಿನಗಳು ಅನಧಿಕೃತ ಗೈರು ಹಾಜರಾಗಿದ್ದು, ಈ ಅನಧಿಕೃತ ಗೈರು ಹಾಜರಿಯನ್ನು ವಿಸ್ತರಿಸಿ ಮತ್ತು ಸಕ್ರಮಗೊಳಿಸಲು ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಸಕ್ಷಮ ಪ್ರಾಧಿಕಾರವಾಗಿಲ್ಲದಿರುವುದರಿಂದ, ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಮತ್ತು ರೇಷ್ಮೆ ನಿರ್ದೇಶಕರು ಹೊರಡಿಸಿರುವ ಆದೇಶಗಳನ್ನು ಹಿಂದಕ್ಕೆ ಪಡೆದು, ಶ್ರೀ ಎಂ.ಪಿ. ಕಿಚಡಿ, ರೇಷ್ಮೆ ಪ್ರವರ್ತಕರು ಇವರು ಅನಧಿಕೃತವಾಗಿ ಗೈರು ಹಾಜರಾಗಿರುವ ಅವಧಿಯನ್ನು ಕರ್ತವ್ಯವಲ್ಲದ ಅವಧಿಯೆಂದು (Dies non) ಪರಿಗಣಿಸಲು ಹಾಗೂ ಪರಿವೀಕ್ಷಣಾ ಅವಧಿಯನ್ನು ದಿನಾಂಕ: 08–02–1988 ರಿಂದ 11–02–2002 ರವರೆಗೆ ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು, 1977ರ ನಿಯಮ 4(1) (i) ರನ್ವಯ ವಿಸ್ತರಿಸಲು ಸರ್ಕಾರವು ತೀರ್ಮಾನಿಸಿರುವ ಕಾರಣ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ತೋಇ 136 ರೇಇವಿ 2011, ಬೆಂಗಳೂರು, ದಿನಾಂಕ: 14ನೇ ಮೇ, 2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಶ್ರೀ ಎಂ.ಪಿ. ಕಿಚಡಿ, ರೇಷ್ಮೆ ಪ್ರವರ್ತಕರು ಪರಿವೀಕ್ಷಣಾ ಅವಧಿಯಲ್ಲಿದ್ದು, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 114(8) ರನ್ವಯ ತಾತ್ಕಾಲಿಕ ನೌಕರರಾಗಿರುತ್ತಾರೆ. ಸದರಿಯವರ ಪರಿವೀಕ್ಷಣಾ ಅವಧಿಯಲ್ಲಿ ಒಟ್ಟು 554 ದಿನಗಳು ಅನಧಿಕೃತ ಗೈರು ಹಾಜರಾಗಿದ್ದು, ಈ ಅನಧಿಕೃತ ಗೈರು ಹಾಜರಿಯನ್ನು ವಿಸ್ತರಿಸಿ ಮತ್ತು ಸಕ್ರಮಗೊಳಿಸಲು ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಸಕ್ಷಮ ಪ್ರಾಧಿಕಾರವಾಗಿಲ್ಲದಿರುವುದರಿಂದ, ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಮತ್ತು ರೇಷ್ಮೆ ನಿರ್ದೇಶಕರು ಹೊರಡಿಸಿರುವ ಆದೇಶಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಿಂದಕ್ಕೆ ಪಡೆದು, ಶ್ರೀ ಎಂ.ಪಿ. ಕಿಚಡಿ, ರೇಷ್ಮೆ ಪ್ರವರ್ತಕರು ಇವರು ಅನಧಿಕೃತವಾಗಿ ಗೈರು ಹಾಜರಾಗಿರುವ ಅವಧಿಯನ್ನು ಕರ್ತವ್ಯವಲ್ಲದ ಅವಧಿಯೆಂದು (Dies non) ಪರಿಗಣಿಸಲು ಹಾಗೂ ಪರಿವೀಕ್ಷಣಾ ಅವಧಿಯನ್ನು ದಿನಾಂಕ: 08–02–1988 ರಿಂದ 11–02–2002 ರವರೆಗೆ ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು, 1977ರ ನಿಯಮ 4(1)(i) ರನ್ವಯ ವಿಸ್ತರಿಸಿ ಸರ್ಕಾರವು ಆದೇಶಿಸಿದೆ.

ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸಿದ ಅವಧಿಗೆ ವಾರ್ಷಿಕ ವೇತನ ಬಡ್ತಿಗಳನ್ನು ನೀಡುವಂತಿಲ್ಲ. ನೌಕರರಿಗೆ ಕಾಲ್ಪನಿಕವಾಗಿ ವೇತನ ಬಡ್ತಿಗಳನ್ನು ಬಿಡುಗಡೆ ಮಾಡಿ ವೇತನವನ್ನು ನಿಗದಿಪಡಿಸಬಹುದು. ಆದರೆ, ವಿಸ್ತರಿಸಿದ ಅವಧಿಗೆ ಯಾವುದೇ ವೇತನ ಬಾಕಿಯನ್ನು ನೀಡುವಂತಿಲ್ಲ.

ಈ ಆದೇಶವನ್ನು ಆರ್ಥಿಕ ಇಲಾಖೆ ಹಾಗೂ ಸಿ.ಆ.ಸು. ಇಲಾಖೆ (ಸೇವಾ ನಿಯಮಗಳು–1) ಗಳ ಟಿಪ್ಪಣಿ ಅನುಕ್ರಮವಾಗಿ ಸಂಖ್ಯೆ: ಆಇ/46/ವೆ–4/2013, ದಿನಾಂಕ: 07–03–2013, ಹಾಗೂ ಸಿಆಸುಇ 121 ಸೇನಿಎ 2013, ದಿನಾಂಕ: 24–04–2013 ರನ್ವಯ ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10–07–1996 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ಎಸ್. ಚಂದ್ರಶೇಖರ್,**
ಪೀಠಾಧಿಕಾರಿ,
ತೋಟಗಾರಿಕೆ ಇಲಾಖೆ (ರೇಷ್ಮೆ).

**P.R. 563**

## ಆರ್ಥಿಕ ಸಚಿವಾಲಯ

**ವಿಷಯ:** ಶ್ರೀ ಎನ್. ಪೂರ್ವಾಚಾರ್, ಪತ್ರಾಂಕಿತ ಉಪಖಜಾನಾಧಿಕಾರಿ, ಅವರ ವಿರುದ್ಧದ ಇಲಾಖಾ ವಿಚಾರಣೆ ಕುರಿತು

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಆಇ 70 ಅಖಇ 2007, ದಿನಾಂಕ: 14–07–2011
2. ಉಪ ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಕಂಪ್ಲೇಟ್/ಉಪಲೋಕ್/ಬಿಡಿ–563/2008/ಡಿಆರ್‌ಇ–1/ದಿನಾಂಕ: 19–02–2013 ಮತ್ತು ಉಪ ಲೋಕಾಯುಕ್ತರು ಕರ್ನಾಟಕ ರಾಜ್ಯ ಇವರ ವರದಿ ದಿನಾಂಕ: 17–03–2011

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆ: (1)ರ ಆದೇಶದಲ್ಲಿ ಶ್ರೀ ಎನ್. ಪೂರ್ವಾಚಾರ್ ಪತ್ರಾಂಕಿತ ಉಪಖಜಾನಾಧಿಕಾರಿ, ಇವರು ಉಪ ಖಜಾನೆ ಹರಪನಹಳ್ಳಿ, ದಾವಣಗೆರೆ ಜಿಲ್ಲೆ ಇಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಪ್ರಾಥಮಿಕ ಆರೋಗ್ಯ ಕೇಂದ್ರ, ಅರಸೀಕೆರೆ ಹರಪನಹಳ್ಳಿ ತಾಲ್ಲೂಕು ಇದರ ಅಧಿಕಾರಿಗಳು ಮತ್ತು ಸಿಬ್ಬಂದಿ ವರ್ಗದ ಒಟ್ಟು ರೂ. 1,27,350/– ಪ್ರವಾಸ ಭತ್ಯೆ ಬಿಲ್ಲುಗಳನ್ನು ಪಾಸು ಮಾಡುವ ಸಲುವಾಗಿ, ಶ್ರೀ ಎಂ. ಹಾಲಪ್ಪ, ದ್ವಿತೀಯ ದರ್ಜೆ ಸಹಾಯಕರು, ಪ್ರಾಥಮಿಕ ಆರೋಗ್ಯ ಕೇಂದ್ರ, ಅರಸೀಕೆರೆ ಇವರಿಂದ ದಿನಾಂಕ: 25–04–2007ರಂದು ರೂ. 7,500/–ಗಳ ಅಕ್ರಮ ಸಂಭಾವನೆಯನ್ನು ಪಡೆಯುತ್ತಿದ್ದಾಗಲೇ ಲೋಕಾಯುಕ್ತ ಪೊಲೀಸರಿಗೆ ಸಿಕ್ಕಿ ಬಿದ್ದಿದ್ದು, ಈ ಹಿನ್ನೆಲೆಯಲ್ಲಿ ಕರ್ನಾಟಕ ಲೋಕಾಯುಕ್ತರ ದಿನಾಂಕ: 17–03–2011ರ ಪತ್ರದಲ್ಲಿನ ಶಿಫಾರಸ್ಸಿನಂತೆ ಹಾಗೂ ಖಜಾನೆ ನಿರ್ದೇಶಕರ ಪ್ರಸ್ತಾವದಂತೆ ಸದರಿಯವರ ವಿರುದ್ಧ ಸನ್ಮಾನ್ಯ ಉಪ ಲೋಕಾಯುಕ್ತರ ಮೂಲಕ ಇಲಾಖಾ ವಿಚಾರಣೆ ನಡೆಸಲು ಆದೇಶಿಸಲಾಗಿತ್ತು. ಆದರೆ ಖಜಾನೆ ನಿರ್ದೇಶಕರಿಂದ ಬಂದ ಪ್ರಸ್ತಾವಕ್ಕೆ ಮಾನ್ಯ ಮುಖ್ಯಮಂತ್ರಿಯವರ ಅನುಮೋದನೆ ಪಡೆದು

ಆದೇಶ ಹೊರಡಿಸುವಲ್ಲಿ ಸುಮಾರು 3–4 ತಿಂಗಳು ವಿಳಂಬವಾಗಿದ್ದು, ಏತನ್ಮಧ್ಯೆ ಆಪಾದಿತ ಅಧಿಕಾರಿ ಶ್ರೀ ಎನ್. ಪೂರ್ವಾಚಾರ್, ಇವರು ದಿನಾಂಕ: 31–05–2011ರಂದು ವಯೋನಿವೃತ್ತಿ ಹೊಂದಿರುವುದರಿಂದ ಹಾಗೂ ನಿಗದಿತ ಅವಧಿಯೊಳಗೆ ಖಜಾನೆ ನಿರ್ದೇಶಕರಿಂದ ಮಂಜೂರಾತಿ ಬಾರದೇ ಇರುವುದರಿಂದ ಇಲಾಖಾ ವಿಚಾರಣೆ ಪ್ರಾರಂಭಿಸಲು ಸಾಧ್ಯವಾಗದ ಪ್ರಯುಕ್ತ ಗೌರವಾನ್ವಿತ ಉಪ ಲೋಕಾಯುಕ್ತರು ಕಡತವನ್ನು ಮುಕ್ತಾಯಗೊಳಿಸುವುದಾಗಿ ಉಪ ನಿಬಂಧಕರು ವಿಚಾರಣೆ–1 ಕರ್ನಾಟಕ ಲೋಕಾಯುಕ್ತ ಇವರು ದಿನಾಂಕ: 19–02–2013ರ ಪತ್ರದಲ್ಲಿ ತಿಳಿಸಿರುತ್ತಾರೆ. ಆದ್ದರಿಂದ ಈ ಪ್ರಕರಣದಲ್ಲಿ ಮುಂದಿನ ಕ್ರಮದ ಅವಶ್ಯಕತೆ ಕಾಣುವುದಿಲ್ಲ.

ಇದನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಗಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಆಇ 70 ಆಖಇ 2007, ಬೆಂಗಳೂರು, ದಿನಾಂಕ: 08ನೇ ಮೇ, 2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಶ್ರೀ ಎನ್. ಪೂರ್ವಾಚಾರ್, ನಿವೃತ್ತ ಪತ್ರಾಂಕಿತ ಉಪಖಜಾನಾಧಿಕಾರಿ, ಖಜಾನೆ ಇಲಾಖೆ ಇವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಕೈ ಬಿಡಲಾಗಿದೆ. ಆದರೆ ಇವರ ವಿರುದ್ಧ ಇದೇ ಆರೋಪಕ್ಕಾಗಿ ವಿಶೇಷ ನ್ಯಾಯಾಲಯ, ದಾವಣಗೆರೆ ಇಲ್ಲಿ ಜಾರಿಯಲ್ಲಿರುವ ವಿಶೇಷ ಪ್ರಕರಣ ಸಂಖ್ಯೆ 10/2007 (ಸೆಷನ್ಸ್)ರಲ್ಲಿನ ಅಂತಿಮ ಆದೇಶವನ್ನು ಕಾದು ನೋಡಲಾಗುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್. ಲಕ್ಷಣ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಆಡಳಿತ & ಮುಂಗಡ).

**P.R. 564**

## ಅಲ್ಪಸಂಖ್ಯಾತರ ಕಲ್ಯಾಣ ಸಚಿವಾಲಯ

**ವಿಷಯ:** ಕರ್ನಾಟಕ ರಾಜ್ಯ ಅಲ್ಪಸಂಖ್ಯಾತರ ಆಯೋಗದ ರಾಜ್ಯದ ವಕ್ಫ್ ಆಸ್ತಿಗಳಲ್ಲಿ ಆಗಿರುವ ಅಕ್ರಮಗಳಿಗೆ ಸಂಬಂಧಿಸಿದಂತೆ ವಿಶೇಷ ವರದಿಯಲ್ಲಿ ಮಾಡಿದ ಶಿಫಾರಸ್ಸಿನ ಮೇಲೆ ರಚಿಸಲಾದ ವಕ್ಫ್ ಆಸ್ತಿಗಳ ಕಾರ್ಯಪಡೆ ಕುರಿತು

**ಓದಲಾಗಿದೆ:** ಕರ್ನಾಟಕ ರಾಜ್ಯ ಅಲ್ಪ ಸಂಖ್ಯಾತರ ಆಯೋಗ ಸಲ್ಲಿಸಿದ ವಿಶೇಷ ವರದಿ ದಿನಾಂಕ: 26–03–2012

**ಪ್ರಸ್ತಾವನೆ:**

ಮೇಲೆ ಓದಲಾದ ವಿಶೇಷ ವರದಿಯಲ್ಲಿ ಕರ್ನಾಟಕ ರಾಜ್ಯ ಅಲ್ಪಸಂಖ್ಯಾತರ ಆಯೋಗವು ಮಾನ್ಯ ಸರ್ವೋಚ್ಛ ನ್ಯಾಯಾಲಯವು ಮೇಲ್ಮನವಿ ಸಂಖ್ಯೆ: 4372/1985 ದಿನಾಂಕ: 28–01–1998ರಲ್ಲಿ ನೀಡಿರುವ ಆದೇಶದಂತೆ ವಕ್ಫ್ ಸ್ವತ್ತುಗಳನ್ನು ಮರಳಿ ಪಡೆಯಲು "ವಕ್ಫ್ ಆಸ್ತಿಗಳ ಕಾರ್ಯಪಡೆ" ರಚಿಸಲು ಶಿಫಾರಸ್ಸು ಮಾಡಿರುತ್ತದೆ. ವರದಿಯನ್ನು ಪರಿಶೀಲಿಸಲಾಗಿ ರಾಜ್ಯದ ವಿವಿಧ ಜಿಲ್ಲೆಗಳಲ್ಲಿ ಅನೇಕ ವಕ್ಫ್ ಆಸ್ತಿಗಳು ಅನಧಿಕೃತದಾರರಿಂದ ಒತ್ತುವರಿಯಾಗಿದ್ದು, ಈ ಸ್ವತ್ತುಗಳ ಸಂರಕ್ಷಣೆ ಇತ್ಯಾದಿ ಕಾರ್ಯಗಳ ಬಗ್ಗೆ ಹಾಗೂ ಇವುಗಳನ್ನು ವಾಪಸ್ಸು ಪಡೆಯುವಂತಹ ಪರಿಣಾಮಕಾರಿಯಾದ ಕ್ರಮ ಕೈಗೊಳ್ಳದೇ ಇರುವುದು ಮನಗಂಡು ಈ ಶಿಫಾರಸ್ಸನ್ನು ಅನುಷ್ಠಾನಕ್ಕೆ ತರಲು ರಾಜ್ಯ ಮತ್ತು ಜಿಲ್ಲಾ ಮಟ್ಟಗಳಲ್ಲಿ ಎರಡು ಹಂತದ ವಕ್ಫ್ ಆಸ್ತಿಗಳ ಕಾರ್ಯಪಡೆ ರಚಿಸಿ ಸ್ಪಷ್ಟ ಜವಾಬ್ದಾರಿಯನ್ನು ನೀಡಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: MWD 26 WES 2013, ಬೆಂಗಳೂರು, ದಿನಾಂಕ: 10ನೇ ಮೇ, 2013**

ಪ್ರಸ್ತಾವನೆಯಲ್ಲಿ ವಿವರಿಸಲಾಗಿರುವಂತೆ ರಾಜ್ಯ ಮತ್ತು ಜಿಲ್ಲಾ ಮಟ್ಟದ ಎರಡು ಹಂತದ ವಕ್ಫ್ ಆಸ್ತಿಗಳ ಕಾರ್ಯಪಡೆ ಈ ಕೆಳಕಂಡಂತೆ ರಚಿಸಲಾಗಿದೆ.

| ಕ್ರ.ಸಂ. | ರಾಜ್ಯಮಟ್ಟದ ವಕ್ಫ್ ಆಸ್ತಿಗಳ ಕಾರ್ಯಪಡೆ | ಜಿಲ್ಲಾ ಮಟ್ಟದ ವಕ್ಫ್ ಆಸ್ತಿಗಳ ಕಾರ್ಯಪಡೆ |
|---|---|---|
| 1. | ಹೆಚ್ಚುವರಿ ಮುಖ್ಯ ಕಾರ್ಯದರ್ಶಿಗಳು ಮತ್ತು ಅಭಿವೃದ್ಧಿ ಆಯುಕ್ತರು, ಅಧ್ಯಕ್ಷರು | ಜಿಲ್ಲಾಧಿಕಾರಿಗಳು–ಅಧ್ಯಕ್ಷರು |
| 2. | ಪ್ರಧಾನ ಕಾರ್ಯದರ್ಶಿ, ಒಳಾಡಳಿತ ಮತ್ತು ಸಾರಿಗೆ ಇಲಾಖೆ–ಸದಸ್ಯರು | ಜಿಲ್ಲಾ ಪೊಲೀಸ್ ಅಧೀಕ್ಷಕರು–ಸದಸ್ಯರು |
| 3. | ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ–ಸದಸ್ಯರು | ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯತಿ – ಸದಸ್ಯರು |
| 4. | ಪ್ರಧಾನ ಕಾರ್ಯದರ್ಶಿ, ಕಾನೂನು ಇಲಾಖೆ–ಸದಸ್ಯರು | ಉಪ ವಿಭಾಗಾಧಿಕಾರಿಗಳು–ಸದಸ್ಯರು |
| 5. | ಪ್ರಧಾನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ–ಸದಸ್ಯರು | ಉಪ ನಿರ್ದೇಶಕರು, ಭೂದಾಖಲೆ–ಸದಸ್ಯರು |
| 6. | ಪ್ರಧಾನ ಕಾರ್ಯದರ್ಶಿ, ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ–ಸದಸ್ಯರು | ಜಿಲ್ಲಾ ಅಧಿಕಾರಿ, ಹಿಂದುಳಿದ ವರ್ಗ ಮತ್ತು ಅಲ್ಪಸಂಖ್ಯಾತರ ಇಲಾಖೆ–ಸದಸ್ಯರು |
| 7. | ಆಯುಕ್ತರು, ಭೂಮಾಪನ ಮತ್ತು ಭೂದಾಖಲೆಗಳ ಇಲಾಖೆ–ಸದಸ್ಯರು | ತಹಸೀಲ್ದಾರರುಗಳು–ಸದಸ್ಯರು |
| 8. | ವಿಭಾಗಾಧಿಕಾರಿಗಳು, ಬೆಂಗಳೂರು, ಮೈಸೂರು, ಬೆಳಗಾವಿ, ಗುಲ್ಬರ್ಗಾ–ಸದಸ್ಯರು | ಅಧ್ಯಕ್ಷರು, ಜಿಲ್ಲಾ ವಕ್ಫ್ ಸಲಹಾ ಸಮಿತಿ–ಸದಸ್ಯರು |
| 9. | ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು, ವಕ್ಫ್ ಮಂಡಳಿ–ಸದಸ್ಯ ಕಾರ್ಯದರ್ಶಿ | ಜಿಲ್ಲಾ ವಕ್ಫ್ ಅಧಿಕಾರಿ–ಸದಸ್ಯ ಕಾರ್ಯದರ್ಶಿ |
| 10. | ಕಾರ್ಯದರ್ಶಿ, ಕರ್ನಾಟಕ ರಾಜ್ಯ ಅಲ್ಪಸಂಖ್ಯಾತರ ಆಯೋಗ–ಸದಸ್ಯರು | |

ಜಿಲ್ಲಾ ಮಟ್ಟದ ವಕ್ಫ್ ಆಸ್ತಿಗಳ ಕಾರ್ಯಪಡೆ ಪ್ರತಿಮಾಹೆ ಕಡ್ಡಾಯವಾಗಿ ಸಭೆ ಸೇರಿ ಈ ಕೆಳಕಂಡ ಪ್ರಮುಖ ವಿಷಯಗಳ ಬಗ್ಗೆ ಸಮಾಲೋಚಿಸಿ ಕ್ರಮ ಕೈಗೊಳ್ಳುವುದು.

1. ಆಯೋಗವು ತನ್ನ ವಿಶೇಷ ವರದಿಯಲ್ಲಿ ಅಕ್ರಮವಾಗಿ ಕೈಬಿಟ್ಟು ಹೋಗಿರುವ ವಕ್ಫ್ ಸ್ವತ್ತುಗಳೆಂದು ಸೂಚಿಸಿರುವ ಆಸ್ತಿಗಳ ಜೊತೆಯಲ್ಲಿ ಅವರ ಜಿಲ್ಲೆಯಲ್ಲಿರುವ ಇಂತಹ ಎಲ್ಲಾ ಆಸ್ತಿಗಳನ್ನು ಗುರುತಿಸಿ ಮರಳಿ ಪಡೆಯಲು ಕಾನೂನಿನ ಅನ್ವಯ ಕ್ರಮ ಕೈಗೊಳ್ಳುವುದು.
2. ವಕ್ಫ್ ಕಾಯಿದೆ ಅನುಸಾರ ರಾಜ್ಯದಲ್ಲಿ 2ನೇ ಹಂತದ ಸರ್ವೆ ಕಾರ್ಯ 1997 ರಿಂದ ನಡೆಸಲಾಗುತ್ತಿದ್ದು, ಇದಕ್ಕೆ ಪ್ರತಿವರ್ಷವು ಅನುದಾನ ಬಿಡುಗಡೆ ಮಾಡಲಾಗುತ್ತಿದೆ. ಈ ಕಾರ್ಯವನ್ನು ನಿಯತ ಕಾಲದಲ್ಲಿ ಪೂರ್ಣಗೊಳಿಸುವುದು ಹಾಗೂ ಗುರುತಿಸಲಾದ ವಕ್ಫ್ ಸ್ವತ್ತುಗಳ ಮೂಲ ದಾಖಲಾತಿಗಳನ್ನು ನಿರ್ವಹಿಸಲು ಅಗತ್ಯ ಕ್ರಮ ಕೈಗೊಳ್ಳುವುದು.
3. ಸ್ವಾಧೀನ ಮತ್ತು ಅನುಭವದಲ್ಲಿರುವ ಎಲ್ಲಾ ಸ್ವತ್ತುಗಳ ಗಡಿಗಳನ್ನು ಗುರುತಿಸಿ ವಕ್ಫ್ ಸಂಸ್ಥೆ ಹಾಗೂ ಸ್ಥಳೀಯ ಸಂಸ್ಥೆಗಳ ಮತ್ತು ಸರ್ಕಾರದಿಂದ ನೀಡಲಾಗಿರುವ ಅನುದಾನದಿಂದ ಬೇಲಿ, ತಂತಿ ಬೇಲಿ, ಕಾಂಪೌಂಡು, ವಕ್ಫ್ ಆಸ್ತಿ ಎಂಬ ನಾಮಫಲಕ ಇತ್ಯಾದಿಗಳನ್ನು ಹಾಕಿ ಖಾಲಿ ಇರುವ ಸ್ವತ್ತುಗಳಲ್ಲಿ ಗಿಡ ನೆಡುವ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಆಸ್ತಿಯ ಸಂರಕ್ಷಣೆಗೆ ಕ್ರಮ ಕೈಗೊಳ್ಳುವುದು.
4. ಗ್ರಾಮೀಣ ಮತ್ತು ನಗರ ಪ್ರದೇಶಗಳಲ್ಲಿ ಇರುವ ವಕ್ಫ್ ಆಸ್ತಿಗಳ ಖಾತೆಯನ್ನು ಕಂದಾಯ, ಪಂಚಾಯತ್ ರಾಜ್ ಮತ್ತು ಪುರಸಭೆ ಹಾಗೂ ಪಾಲಿಕೆಗಳ ಕಛೇರಿಗಳಲ್ಲಿ ರಾಜ್ಯಪತ್ರದಲ್ಲಿ ಪ್ರಕಟಗೊಳಿಸಲಾಗಿರುವ ವಕ್ಫ್ ಅಧಿಸೂಚನೆಗಳ ಪ್ರಕಾರ ಹಾಗೂ ವಕ್ಫ್ ಮಾಡಿರುವ ಡೀಡ್ ಅನುಸಾರ ಖಾತೆ ಮಾಡಿ ಈ ಸ್ವತ್ತುಗಳು ಸ್ಥಳೀಯ ವಕ್ಫ್ ಸಂಸ್ಥೆಗಳು ಕಾನೂನು ಬಾಹಿರವಾಗಿ ಪರಭಾರೆ ಮಾಡದೆ ಇರುವ ಹಾಗೆ ಖಾತೆಯ ಇತರೆ ಹಕ್ಕಿನ ಕಾಲಂನಲ್ಲಿ "ಕರ್ನಾಟಕ ರಾಜ್ಯ ವಕ್ಫ್ ಮಂಡಳಿ" ಎಂದು ನಮೂದಿಸಲು ಕ್ರಮ ಕೈಗೊಳ್ಳುವುದು.
5. ರಾಜ್ಯದಲ್ಲಿ ಇನಾಂ ರದ್ದಿಯಾತಿ ಕಾಯಿದೆ ಮತ್ತು ಭೂಸುಧಾರಣೆ ಕಾಯ್ದೆ ಜಾರಿಗೆ ಬಂದ ನಂತರ ಕಾನೂನು ಬಾಹಿರವಾಗಿ ಹೋಗಿರುವ ವಕ್ಫ್ ಸ್ವತ್ತುಗಳನ್ನು ವಾಪಸ್ಸು ಪಡೆಯುವ ಉದ್ದೇಶದಿಂದ ಮೇಲ್ಮನವಿಗಳನ್ನು ಸಲ್ಲಿಸಿ ಸಕ್ಷಮ ನ್ಯಾಯಾಲಯಗಳಲ್ಲಿ ಸೂಕ್ತ ಆದೇಶಗಳನ್ನು ಪಡೆದು ಆಸ್ತಿಗಳ ಸ್ವಾಧೀನವನ್ನು ಮರಳಿ ಪಡೆಯುವುದು. ಕಾನೂನು ಅನ್ವಯ ಮೇಲ್ಮನವಿ ಸಲ್ಲಿಸಲಾಗದಂತಹ ಪ್ರಕರಣಗಳಲ್ಲಿ ಸಕ್ಷಮ ಪ್ರಾಧಿಕಾರದಿಂದ ತಸ್ಥೀಕ್ ಮತ್ತು ವರ್ಷಾಸನ ನಿಗದಿಪಡಿಸಲು ಕ್ರಮ ಕೈಗೊಳ್ಳುವುದು.
6. ವಕ್ಫ್ ಆಸ್ತಿಗಳನ್ನು ಹಿಂದಿನಿಂದಲೂ ಕಾನೂನು ಅನ್ವಯ ಯಾವುದೇ ಪ್ರಕ್ರಿಯೆ ಜರುಗಿಸದೆ ಸಾರ್ವಜನಿಕ ಉದ್ದೇಶಗಳಿಗೆ ಸ್ವಾಧೀನಪಡಿಸಿಕೊಂಡಿರುವುದನ್ನು ಗುರುತಿಸಿ ಅದಕ್ಕೆ ಬರಬೇಕಾದ ಪರಿಹಾರಧನವನ್ನು ಪಡೆದು ಸದರಿ ಜಮೀನು ವಕ್ಫ್ ಮಾಡಿದ ಉದ್ದೇಶಕ್ಕೆ ಸಂಸ್ಥೆಯವರು ಉಪಯೋಗಿಸುವಂತೆ ಕ್ರಮ ಜರುಗಿಸುವುದು.

ರಾಜ್ಯ ಮಟ್ಟದ ವಕ್ಫ್ ಆಸ್ತಿಗಳ ಕಾರ್ಯಪಡೆ ಪ್ರತಿ ಮೂರು ತಿಂಗಳಿಗೊಮ್ಮೆ ಜಿಲ್ಲಾ ಮಟ್ಟದ ವಕ್ಫ್ ಕಾರ್ಯಪಡೆಯ ಪ್ರಗತಿಯನ್ನು ಪರಿಶೀಲಿಸಿ ಸೂಕ್ತ ಮಾರ್ಗದರ್ಶನ ನೀಡಿ ಕಾರ್ಯ ಪೂರ್ಣಗೊಳಿಸುವುದು.

ಜಿಲ್ಲಾ ಮಟ್ಟದ ಕಾರ್ಯಪಡೆಯ ಅಧ್ಯಕ್ಷರು ಪ್ರತಿ ಮಾಹೆ 10ನೇ ತಾರೀಖಿನ ಒಳಗೆ ಮೇಲ್ಕಂಡ ಎಲ್ಲಾ ಅಂಶಗಳ ಬಗ್ಗೆ ಅವರ ಜಿಲ್ಲೆಯಲ್ಲಿ ಸಾಧಿಸಿದ ಪ್ರಗತಿಯ ಬಗ್ಗೆ ವರದಿಯನ್ನು ರಾಜ್ಯಮಟ್ಟದ ಕಾರ್ಯಪಡೆಯ ಅಧ್ಯಕ್ಷರು ಮತ್ತು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ ಇವರಿಗೆ ಸಲ್ಲಿಸುವುದು.

ಸಚಿವ ಸಂಪುಟದ ವಿಷಯ ಸಂಖ್ಯೆ: ಸಿ/319/2013, ದಿನಾಂಕ: 16-03-2013ರಂದು ನಡೆದ ಸಚಿವ ಸಂಪುಟದ ಸಭೆಯಲ್ಲಿ ಅನುಮೋದಿಸಲಾಗಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಅಬ್ಬಾಸ್ ಷರೀಫ್,**

ಸರ್ಕಾರದ ಅಧೀನ ಕಾರ್ಯದರ್ಶಿ,

ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ

**P.R. 565**

**SC - 500**

## ಶಿಕ್ಷಣ ಸಚಿವಾಲಯ

**ವಿಷಯ:** ಶ್ರೀ ದತ್ತಪ್ಪ ತಳವಾರ, ಕ್ಷೇತ್ರ ಶಿಕ್ಷಣಾಧಿಕಾರಿ, ಉತ್ತರ ವಲಯ, ಗುಲ್ಬರ್ಗಾ ಇವರ ವಿರುದ್ಧ ದಾಖಲಾಗಿರುವ ಟ್ರ್ಯಾಪ್ ಪ್ರಕರಣದಲ್ಲಿ ಅಭಿಯೋಜನಾ ಮಂಜೂರಾತಿ ನೀಡುವ ಬಗ್ಗೆ

**ಓದಲಾಗಿದೆ:**

1. ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಜಿ-12/ಸಿಆರ್ 5/2012 ಗುಲ್ಬರ್ಗಾ, ದಿನಾಂಕ: 02-02-2013
2. ತನಿಖಾಧಿಕಾರಿಯವರ ಅಂತಿಮ ವರದಿ
3. ತನಿಖಾ ದಾಖಲೆಗಳ ನಕಲುಗಳಾದ ಫಿರ್ಯಾದು, ಪ್ರಥಮ ವರ್ತಮಾನ ಪತ್ರ, ಪ್ರಾಯೋಗಿಕ ಪಂಚನಾಮೆ, ಹಣ ಜಪ್ತಿ ಪಂಚನಾಮೆ, ಸ್ವತ್ತುಗಳ ಪಟ್ಟಿ, ರಾಸಾಯನಿಕ ಪರೀಕ್ಷಕರ ವರದಿ, ಸಾಕ್ಷಿದಾರರ ಹೇಳಿಕೆಗಳು, ಲಂಚದ ಬೇಡಿಕೆಗೆ ಸಂಬಂಧಪಟ್ಟ ದಾಖಲೆಗಳು

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1) ದಿನಾಂಕ: 02-02-2013ರ ಪತ್ರದಲ್ಲಿ ಶ್ರೀ ದತ್ತಪ್ಪ ತಳವಾರ, ಕ್ಷೇತ್ರ ಶಿಕ್ಷಣಾಧಿಕಾರಿ, ಉತ್ತರ ವಲಯ, ಗುಲ್ಬರ್ಗಾ ಇವರ ವಿರುದ್ಧ ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ಮೇಲೆ ಕ್ರಮಾಂಕ (2) ಮತ್ತು (3) ರಂತೆ ಗುನ್ನೆ ಸಂಖ್ಯೆ: 05/2012ರಲ್ಲಿ ಪೊಲೀಸ್ ಇನ್ಸ್‌ಪೆಕ್ಟರ್, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಗುಲ್ಬರ್ಗಾ ಪೊಲೀಸ್ ಠಾಣೆಯಲ್ಲಿ ದಾಖಲಿಸಿರುವ

ಪ್ರಕರಣದ ತನಿಖಾಧಿಕಾರಿಯ ಅಂತಿಮ ವರದಿಯ ನಕಲು ಮತ್ತು ತನಿಖಾ ದಾಖಲಾತಿಗಳನ್ನು ಕಳುಹಿಸಿ, ಆಪಾದಿತರನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧಕ ಕಾಯ್ದೆ 1988ರ ಕಲಂ 19(1)(ಬಿ)ರ ಅನ್ವಯ ಮಂಜೂರಾತಿಗಾಗಿ ಸರ್ಕಾರವನ್ನು ಕೋರಿರುತ್ತಾರೆ.

ಸಕ್ಷಮ ಪ್ರಾಧಿಕಾರಿಯಾದ ಸರ್ಕಾರವು ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ತಮ್ಮ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಜಿ–12/ಸಿಆರ್–5/2012 ಗುಲ್ಬರ್ಗಾ ದಿನಾಂಕ: 02–02–2013ರೊಂದಿಗೆ ಕಳುಹಿಸಿಕೊಟ್ಟ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಿದೆ.

1) ಫಿರ್ಯಾದಿ ಶ್ರೀ ಪ್ರಭುಲಿಂಗ ತಂದೆ ದಯಾನಂದ ಬಿರಾದಾರ 46 ವರ್ಷ, ಸಹ ಶಿಕ್ಷಕರು ಸರ್ಕಾರಿ ಪ್ರಾಥಮಿಕ ಶಾಲೆ ಕರಹರಿ ನಿಯೋಜನೆ ಮೇರೆಗೆ ಸಿ.ಆರ್.ಸಿ. ಮಾಹಾಗಾಂವನಲ್ಲಿ ಸಿ.ಆರ್.ಪಿ. ಇವರ ದೂರು ದಿನಾಂಕ: 16–04–2012
2) ಗುಲ್ಬರ್ಗಾ ಲೋಕಾಯುಕ್ತ ಪೊಲೀಸ್ ಠಾಣೆ ಗುನ್ನೆ ಸಂಖ್ಯೆ: 05/2012 ಕಲಂ 7, 13(1)(ಡಿ) ಆಧಾರ 13(2) ಪಿಸಿ ಕಾಯ್ದೆ–1998 ಪ್ರಥಮ ವರ್ತಮಾನ ವರದಿ ದಿನಾಂಕ: 16–04–2012
3) ಪ್ರಾಯೋಗಿಕ ಪಂಚನಾಮೆ (ಎಂಟ್ರಸ್ಮೆಂಟ್ ಮಹಜರ್) ದಿನಾಂಕ: 16–04–2012
4) ಹಣ ಜಪ್ತಿ ಪಂಚನಾಮೆ (ಟ್ರ್ಯಾಪ್ ಮಹಜರ್) ದಿನಾಂಕ: 16–04–2012
5) ಸಹಾಯಕ ರಸಾಯನ ಪರಿವೀಕ್ಷಕರು, ಗುಲ್ಬರ್ಗಾ ವಲಯ ಇವರ ಪರಿವೀಕ್ಷಣಾ ವರದಿ ಪತ್ರ ಸಂಖ್ಯೆ: PHI/CME/LOK/18/12-13, Dated: 05-05-2012
6) ಕೃತ್ಯ ನಡೆದ ಸ್ಥಳದ ನಕಾಶೆ.
7) **ಸಾಕ್ಷಿಗಳ ಹೇಳಿಕೆಗಳು**
    1. ಶ್ರೀ ಪ್ರಭುಲಿಂಗ ತಂದೆ ದಯಾನಂದ ಬಿರಾದಾರ 46 ವರ್ಷ, ಸಹ ಶಿಕ್ಷಕರು, ಸರ್ಕಾರಿ ಪ್ರಾಥಮಿಕ ಶಾಲೆ, ಕರಹರಿ ನಿಯೋಜನೆ ಮೇರೆಗೆ ಸಿ.ಆರ್.ಸಿ, ಮಾಹಾಗಾಂವ (ಫಿರ್ಯಾದಿ)
    2. ಶ್ರೀ ಉದಯಕುಮಾರ ತಂದೆ ತುಳಸಿರಾಮ ಗಾಯಕವಾಡ, 49 ವರ್ಷ, ಎಸ್.ಡಿ.ಎ., ಅಬಕಾರಿ ಉಪ ಆಯುಕ್ತರ ಕಛೇರಿ, ಗುಲ್ಬರ್ಗಾ (ಪಂಚಸಾಕ್ಷಿ)
    3. ಶ್ರೀ ಗುರುಲಿಂಗಪ್ಪ ತಂದೆ ಭೀಮರಾಯ ಬಗಲಿ 29 ವರ್ಷ, ಸಹಾಯಕ ತೋಟಗಾರಿಕೆ ಅಧಿಕಾರಿಗಳು, ತೋಟಗಾರಿಕೆ ನಿರ್ದೇಶಕರ ಕಛೇರಿ, ಗುಲ್ಬರ್ಗಾ (ಪಂಚ ನೆರಳು ಸಾಕ್ಷಿ)
    4. ಶ್ರೀ ವಿನೋದ ಬಾಬು ತಂದೆ ಶಿವಶರಣಪ್ಪ ಮೇಲಕೇರಿ 56 ವರ್ಷ, ಕಛೇರಿ ಅಧೀಕ್ಷಕರು, ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ, ಉತ್ತರ ವಲಯ, ಗುಲ್ಬರ್ಗಾ
    5. ಶ್ರೀ ಮಲ್ಲಣ್ಣ ತಂದೆ ಸಾಯಿಬಣ್ಣಾ ಮಡಿವಾಳ 53 ವರ್ಷ, ಗೆಜೆಟೆಡ್ ಮ್ಯಾನೇಜರ್, ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ, ಉತ್ತರ ವಲಯ, ಗುಲ್ಬರ್ಗಾ
    6. ಶ್ರೀಮತಿ ಮಹೇಶ್ವರಿ ಗಂಡ ಸಂತೋಷಕುಮಾರ ಮುಲಗೆ 28 ವರ್ಷ, ಸಿ.ಸಿ.ಟಿ., ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ, ಉತ್ತರ ವಲಯ, ಗುಲ್ಬರ್ಗಾ
    7. ಶ್ರೀಮತಿ ಸುಜಾತ ಗಂಡ ದಿಲೀಪ ಕುಲಕರ್ಣಿ 42 ವರ್ಷ, ಬಿ.ಆರ್.ಪಿ. (ಸಂಪನ್ಮೂಲ ವ್ಯಕ್ತಿ) ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ, ಉತ್ತರ ವಲಯ, ಗುಲ್ಬರ್ಗಾ
    8. ಶ್ರೀ ಬಸವರಾಜ ತಂದೆ ರೇವಣಸಿದ್ದಪ್ಪ ಅರಳಿ 50 ವರ್ಷ, ಪ್ಯೂನ್, ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ, ಉತ್ತರ ವಲಯ, ಗುಲ್ಬರ್ಗಾ
    9. ಶ್ರೀಮತಿ ಅನುಸುಯಾ ಗಂಡ ವೀರಭದ್ರಪ್ಪ ಮದನಿ, 40 ವರ್ಷ, ಪ್ಯೂನ್, ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ, ಉತ್ತರ ವಲಯ, ಗುಲ್ಬರ್ಗಾ
    10. ಶ್ರೀ ಮಂಜುನಾಥ ತಂದೆ ಗುರಣ್ಣಾ ತಡಕಲ್, 22 ವರ್ಷ, ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ, ಉತ್ತರ ವಲಯ, ಗುಲ್ಬರ್ಗಾ
    11. ಶ್ರೀ ದೇಶಮುಖ ತಂದೆ ಶಂಕ್ರಣ್ಣಾ ಹಂಚಾಟೆ, ಕ್ಷೇತ್ರ ಸಮನ್ವಯಾಧಿಕಾರಿಗಳು, ಉತ್ತರ ವಲಯ, ಗುಲ್ಬರ್ಗಾ
    12. ಶ್ರೀ ಬಿ.ಎಸ್. ಪರಮೇಶ ತಂದೆ ಸುಬ್ಬೇಗೌಡ, ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಗುಲ್ಬರ್ಗಾ
    13. ಶ್ರೀ ರುಬೀನ್ ಬಾಬು, ಕಿರಿಯ ಅಭಿಯಂತರರು, ಲೋಕೋಪಯೋಗಿ ಇಲಾಖೆ ಉಪ ವಿಭಾಗ, ಗುಲ್ಬರ್ಗಾ
    14. ಶ್ರೀ ಜಗನ್ನಾಥ ತಂದೆ ಮುಕುಂದಪ್ಪ ಪಾಟೀಲ, ಮುಖ್ಯ ಲೆಕ್ಕಿಗ, ಮಹಾನಗರ ಪಾಲಿಕೆ, ಗುಲ್ಬರ್ಗಾ
    15. ಶ್ರೀ ಶಂಕರ ತಂದೆ ಅಂಬಾರಾಯ, 51 ವರ್ಷ, ಸಿ.ಹೆಚ್.ಸಿ., ಕರ್ನಾಟಕ ಲೋಕಾಯುಕ್ತ ಠಾಣೆ, ಗುಲ್ಬರ್ಗಾ
    16. ಶ್ರೀ ಲಿಂಗಣ್ಣ ತಂದೆ ಶಿವಣ್ಣ ಪೂಜಾರಿ, ಹೆಚ್.ಸಿ. ಕರ್ನಾಟಕ ಲೋಕಾಯುಕ್ತ ಠಾಣೆ, ಗುಲ್ಬರ್ಗಾ
    17. ಶ್ರೀ ಗಂಗಾಧರ ತಂದೆ ಗುರುಲಿಂಗಯ್ಯ ಸ್ವಾಮಿ, 55 ವರ್ಷ, ಹೆಚ್.ಸಿ. ಕರ್ನಾಟಕ ಲೋಕಾಯುಕ್ತ ಠಾಣೆ, ಗುಲ್ಬರ್ಗಾ
    18. ಶ್ರೀ ಅನಿಲಕುಮಾರ ತಂದೆ ಬಸವರಾಜ ಕವಡಿ, ಹೆಚ್.ಸಿ. ಕರ್ನಾಟಕ ಲೋಕಾಯುಕ್ತ ಠಾಣೆ, ಗುಲ್ಬರ್ಗಾ
    19. ಶ್ರೀ ಪ್ರದೀಪಕುಮಾರ ತಂದೆ ಭರತರಾವ ಶಿರೋಳಿಕರ, ಪಿ.ಸಿ. ಕರ್ನಾಟಕ ಲೋಕಾಯುಕ್ತ ಠಾಣೆ, ಗುಲ್ಬರ್ಗಾ
    20. ಶ್ರೀ ಪ್ರಹ್ಲಾದ ಕುಲಕರ್ಣಿ, ಪಿ.ಸಿ. ಕರ್ನಾಟಕ ಲೋಕಾಯುಕ್ತ ಠಾಣೆ, ಗುಲ್ಬರ್ಗಾ
    21. ಶ್ರೀ ಕಾಶಿನಾಥ, ಪಿ.ಸಿ. ಕರ್ನಾಟಕ ಲೋಕಾಯುಕ್ತ ಠಾಣೆ, ಗುಲ್ಬರ್ಗಾ
    22. ಶ್ರೀ ಫಹೀಮುದ್ದೀನ್, ಪಿ.ಸಿ. ಕರ್ನಾಟಕ ಲೋಕಾಯುಕ್ತ ಠಾಣೆ, ಗುಲ್ಬರ್ಗಾ
    23. ಶ್ರೀ ಪಾಂಡುರಂಗ, ಪಿ.ಸಿ. ಕರ್ನಾಟಕ ಲೋಕಾಯುಕ್ತ ಠಾಣೆ, ಗುಲ್ಬರ್ಗಾ
    24. ಶ್ರೀ ಅಶೋಕಕುಮಾರ, ಪಿ.ಸಿ. ಕರ್ನಾಟಕ ಲೋಕಾಯುಕ್ತ ಠಾಣೆ, ಗುಲ್ಬರ್ಗಾ

8) **ಲಂಚ ಕೇಳಲು ಆಧಾರವಾದ ಕಡತ:–** ಈ ಪ್ರಕರಣದ ಫಿರ್ಯಾದಿದಾರ ಶ್ರೀ ಪ್ರಭುಲಿಂಗ ತಂದೆ ದಯಾನಂದ ಬಿರಾದಾರ, ಸಹ ಶಿಕ್ಷಕರು, ಸರ್ಕಾರಿ ಪ್ರಾಥಮಿಕ ಶಾಲೆ, ಕರಹರಿ ಇವರು ಕಳೆದ ಒಂದೂವರೆ ವರ್ಷಗಳಿಂದ ನಿಯೋಜನೆ ಮೇರೆಗೆ ಮಹಾಗಾಂವ ಸಿ.ಆರ್.ಸಿ. ಕೇಂದ್ರದಲ್ಲಿ ಸಿ.ಆರ್.ಪಿ. ಆಗಿ ಕರ್ತವ್ಯ ನಿರ್ವಹಿಸುತ್ತಿರುತ್ತಾರೆ. ಇವರು ಜೂನ್ 2011 ರಿಂದ ಮಾರ್ಚ್ 2012ರವರೆಗೆ ತಮ್ಮ ವ್ಯಾಪ್ತಿಯ ಎಸ್.ಡಿ.ಎಂ.ಸಿ. ಸದಸ್ಯರುಗಳಿಗೆ ತರಬೇತಿಗಳನ್ನು ನಡೆಸಿದ ಸಂಬಂಧ ಭರಿಸಲಾದ ಬಿಲ್ಲುಗಳ ಬಾಬ್ತು ಟಿ.ಪಿ. ಮತ್ತು ಟಿ.ಡಿ. ಹಾಗೂ ಪ್ರಯಾಣ ಭತ್ಯೆಗಳನ್ನು ತನ್ನ ಸ್ವಂತ ಕೈಯಿಂದ ಭರಿಸಿದ ಒಟ್ಟು ಹಣ ರೂ. 1,39,000/–ಗಳನ್ನು ಮರುಪಾವತಿಸುವಂತೆ ರಸೀದಿಗಳೊಂದಿಗೆ ಕ್ಷೇತ್ರ ಶಿಕ್ಷಣಾಧಿಕಾರಿ, ಉತ್ತರ ವಲಯ, ಗುಲ್ಬರ್ಗಾರವರಿಗೆ ಸಲ್ಲಿಸಿರುತ್ತಾರೆ. ಅದರಲ್ಲಿ ಇಲ್ಲಿಯವರೆಗೆ ರೂ. 1,05,000/–ಗಳನ್ನು ಪಾವತಿಸಿದ್ದು, ಉಳಿದ ಹಣ ರೂ. 34,000/– ಗಳಿಗೆ ಚೆಕ್ ನೀಡಲು ಕ್ಷೇತ್ರ ಶಿಕ್ಷಣಾಧಿಕಾರಿ ಉತ್ತರ ವಲಯ, ಗುಲ್ಬರ್ಗಾ ಇವರು ಒಟ್ಟು ಬಿಲ್ಲಿನ ಶೇ. 20 ರಂತೆ ರೂ. 26,000/–ಗಳನ್ನು ಲಂಚದ ಬೇಡಿಕೆ ಇಟ್ಟಿರುತ್ತಾರೆ. ಫಿರ್ಯಾದಿಗೆ ಲಂಚ ನೀಡಲು ಮನಸ್ಸಿಲ್ಲದ ಕಾರಣ ದಿನಾಂಕ: 11/04/2012ರಂದು ಗುಲ್ಬರ್ಗಾ ಲೋಕಾಯುಕ್ತ ಠಾಣೆಗೆ ಬಂದು ಪೊಲೀಸ್ ಇನ್ಸ್‌ಪೆಕ್ಟರ್ ರವರನ್ನು ಭೇಟಿ ಮಾಡಿ ಲಂಚ ಕೇಳುತ್ತಿರುವ ವಿಷಯ ತಿಳಿಸಿ ಲಂಚದ ಸಂಭಾಷಣೆ ಧ್ವನಿ ಮುದ್ರಿಸಿಕೊಂಡು ಬರಲು ವಾಯ್ಸ್ ರೆಕಾರ್ಡರನ್ನು ಪಡೆದುಕೊಂಡು ಹೋಗಿರುತ್ತಾರೆ. ಅದರಂತೆ ದಿನಾಂಕ: 12–04–2012ರಂದು ಕ್ಷೇತ್ರ ಶಿಕ್ಷಣಾಧಿಕಾರಿ ಕಛೇರಿ, ಗುಲ್ಬರ್ಗಾ ಇಲ್ಲಿಗೆ ಹೋಗಿ ಶ್ರೀ ದತ್ತಪ್ಪ ತಳವಾರ ಭೇಟಿ ಮಾಡಿ ಚೆಕ್‌ನ್ನು ನೀಡುವಂತೆ ಕೋರಿದ್ದಾಗ ಅವರು ಬಿಲ್ಲಿನ ಒಟ್ಟು ಮೊತ್ತದ ಶೇ. 20ರಂತೆ ರೂ. 26,400/– ಆಗುತ್ತದೆ. ಆದ್ದರಿಂದ ರೂ. 26,000 ವನ್ನು ತಂದು ಕೊಟ್ಟಲ್ಲಿ ಚೆಕ್ ನೀಡುವುದಾಗಿ ತಿಳಿಸಿರುತ್ತಾರೆ. ಕಾನೂನು ಬದ್ಧ ಬಿಲ್ಲಿನ ಚೆಕ್ ಕೊಡಲು ಶ್ರೀ ದತ್ತಪ್ಪ ತಳವಾರ ಅವರು ರೂ. 26,000/– ಲಂಚ ಕೇಳುತ್ತಿರುವುದರಿಂದ ಅವರ ವಿರುದ್ಧ ಸೂಕ್ತ ಕಾನೂನು ಕ್ರಮ ಕೈಗೊಳ್ಳುವಂತೆ ದಿನಾಂಕ: 16–04–2012ರಂದು ಲಂಚದ ಬೇಡಿಕೆಯ ಧ್ವನಿ ಮುದ್ರಿತ ವಾಯ್ಸ್ ರೆಕಾರ್ಡರನ್ನು ಮತ್ತು ಲಂಚದ ಹಣದೊಂದಿಗೆ ಬಂದು ಲಂಚ ಕೇಳುತ್ತಿರುವ ಕ್ಷೇತ್ರ ಶಿಕ್ಷಣಾಧಿಕಾರಿರವರ ಮೇಲೆ ಸೂಕ್ತ ಕ್ರಮ ಕೈಗೊಳ್ಳುವಂತೆ ಗುಲ್ಬರ್ಗಾ ಲೋಕಾಯುಕ್ತ ಠಾಣೆಗೆ ಬಂದು ತನಿಖಾಧಿಕಾರಿಯವರಿಗೆ ಭೇಟಿಯಾಗಿ ಮೇಲಿನಂತೆ ವಿಷಯ ತಿಳಿಸಿರುತ್ತಾರೆ.

9) **ಆಪಾದಿತರ ಸಮಜಾಯಿಸಿ ಹೇಳಿಕೆ ದಿನಾಂಕ: 16–04–2012:–**ಆಪಾದಿತ ಅಧಿಕಾರಿ ಶ್ರೀ ದತ್ತಪ್ಪ ತಳವಾರ, ಕ್ಷೇತ್ರ ಶಿಕ್ಷಣಾಧಿಕಾರಿ, ಉತ್ತರ ವಲಯ, ಗುಲ್ಬರ್ಗಾ ಇವರಿಗೆ ತನ್ನ ಬಳಿ ಲಂಚದ ಹಣ ದೊರೆತ ಬಗ್ಗೆ ವಿವರಣೆ ನೀಡುವಂತೆ ಸೂಚಿಸಲಾಗಿ ಈ ಕೆಳಗಿನಂತೆ ತಮ್ಮ ವಿವರಣೆಯನ್ನು ಸ್ವತಃ ಬರೆದುಕೊಟ್ಟಿರುತ್ತಾರೆ.

> "ನನ್ನ ಫೆಬ್ರವರಿ 2012 ಮತ್ತು ಮಾರ್ಚ್ 2012ರ ವೇತನ ಆಗಿರುವುದಿಲ್ಲ. ನನಗೆ ಸಂಸಾರದ ಅಡಚಣೆಗೋಸ್ಕರ ಶ್ರೀ ಪ್ರಭುಲಿಂಗರ ಹತ್ತಿರ ಸಾಲ ಕೇಳಿದ್ದು ಆತ ಬ್ಯಾಂಕ್‌ಗೆ ಚೆಕ್ ಹಾಕಿರುತ್ತೇನೆ. ಡ್ರಾ ಮಾಡಿದ ನಂತರ ಕೊಡುತ್ತೇನೆ ಎಂದು ಹೇಳಿರುತ್ತಾನೆ. ನಾನು ಮನೆ ಸಾಲದ ಕಂತನ್ನು ಹೆಚ್.ಡಿ.ಎಫ್.ಸಿ. ಕಟ್ಟಬೇಕಾಗಿತ್ತು. ಬೆಂಗಳೂರಿನಿಂದ ಈ ಬಗ್ಗೆ ದೂರವಾಣಿ ಮಾಡಿ ಕೇಳುತ್ತಿದ್ದುದರಿಂದ ನಾನು ಆತನಿಂದ ರೂ. 30,000/– ಸಾಲ ಕೇಳಿದೆ. ಇಂದು ಬೆಳಿಗ್ಗೆ ರೂ. 26,000/– ಇದೆ ನಾಳೆ ಮತ್ತೆ ರೂ. 4,000/– ಕೊಡುತ್ತೇನೆ ಎಂದು ತಿಳಿಸಿದ ಪ್ರಯುಕ್ತ ಆತನಿಂದ ಸಾಲದ ರೂಪದಲ್ಲಿ ಪಡೆದುಕೊಂಡಿರುತ್ತೇನೆ. ಆದರೆ ಆತನಿಗೆ ನೀಡಬೇಕಾದ ರೂ. 34,200/– ಚೆಕನ್ನು ಆತ ನನಗೆ ಪೋನ್ ಮಾಡಿ ನನ್ನ ಹತ್ತಿರ ಚೆಕ್ ಇಟ್ಟುಕೊಳ್ಳುವಂತೆ ಸೋಮವಾರ ಪಡೆಯುತ್ತೇನೆ ಎಂದು ತಿಳಿಸಿದ್ದರಿಂದ ನನ್ನ ಹತ್ತಿರ ಚೆಕ್ ಇಟ್ಟುಕೊಂಡಿರುತ್ತೇನೆ. ಎರಡು ತಿಂಗಳ ವೇತನ ಇಲ್ಲದ ಪ್ರಯುಕ್ತ ಸಾಲ ಕೇಳಿರುತ್ತೇನೆ. ನನ್ನ ವೇತನ ಆದ ನಂತರ ಕೊಡಲು ಒಪ್ಪಿಕೊಂಡಿದ್ದೆ. ಆದರೆ ಶ್ರೀ ದೇಶಮುಖ್ ಮತ್ತು ಶ್ರೀ ಪ್ರಭುಲಿಂಗ ಬಿರಾದಾರ ಇಬ್ಬರು ಸೇರಿಕೊಂಡು ನನ್ನ ಆಡಳಿತ ಸಹಿಸಲಾಗದೇ ಮೋಸ ಮಾಡಿ ಲಂಚ ಕೇಳಿರುತ್ತೇನೆ ಎಂದು ಲೋಕಾಯುಕ್ತಕ್ಕೆ ದೂರು ನೀಡಿರುತ್ತಾರೆ."

ತನಿಖಾಧಿಕಾರಿಗಳಾದ ವಿನಾಯಕ ಬಡಿಗೇರ, ಪೊಲೀಸ್ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆ, ಗುಲ್ಬರ್ಗಾ ಇವರು ಶ್ರೀ ದತ್ತಪ್ಪ ತಳವಾರ, ಕ್ಷೇತ್ರ ಶಿಕ್ಷಣಾಧಿಕಾರಿ, ಉತ್ತರ ವಲಯ, ಗುಲ್ಬರ್ಗಾ ಇವರ ವಿರುದ್ಧ ದಂಡಾರ್ಹ ಪ್ರಕರಣವನ್ನು ಕರ್ನಾಟಕ ಲೋಕಾಯುಕ್ತ ಗುಲ್ಬರ್ಗಾ, ಪೊಲೀಸ್ ಠಾಣೆಯಲ್ಲಿ ಮೊ. ಸಂಖ್ಯೆ: 05/2012ರಲ್ಲಿ ಲಂಚ ಪ್ರತಿಬಂಧಕ ಕಾಯ್ದೆ 1988ರ ಕಲಂ–7, 13(1)(ಡಿ) ಜೊತೆಯಲ್ಲಿ 13(2)ರ ಅಡಿಯಲ್ಲಿ ದಾಖಲಿಸಿರುತ್ತಾರೆ.

ಆಪಾದಿತರಾದ ಶ್ರೀ ದತ್ತಪ್ಪ ತಳವಾರ, ಕ್ಷೇತ್ರ ಶಿಕ್ಷಣಾಧಿಕಾರಿ, ಉತ್ತರ ವಲಯ, ಗುಲ್ಬರ್ಗಾ ಇವರು ಫಿರ್ಯಾದಿದಾರ ಶ್ರೀ ಪ್ರಭುಲಿಂಗ ತಂದೆ ದಯಾನಂದ ಬಿರಾದಾರ, ಇವರು ಮಹಾಗಾಂವ್ ಸಿ.ಆರ್.ಸಿ. ಕೇಂದ್ರದಲ್ಲಿ ಸಿ.ಆರ್.ಪಿ. ಆಗಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಜೂನ್ 2011ರಿಂದ ಮಾರ್ಚ್ 2012ರವರೆಗೆ ಟಿ.ಪಿ. ಮತ್ತು ಟಿ.ಡಿ. ಹಾಗು ಪ್ರಯಾಣ ಭತ್ಯೆಗಳನ್ನು ತನ್ನ ಸ್ವಂತ ಕೈಯಿಂದ ಭರಿಸಿದ ಒಟ್ಟು ಹಣ ರೂ. 1,39,000/–ಗಳನ್ನು ಮರುಪಾವತಿಸುವಂತೆ ರಸೀದಿಗಳೊಂದಿಗೆ ಕ್ಷೇತ್ರ ಶಿಕ್ಷಣಾಧಿಕಾರಿ, ಉತ್ತರ ವಲಯ, ಗುಲ್ಬರ್ಗಾರವರಿಗೆ ಸಲ್ಲಿಸಿರುತ್ತಾರೆ. ಈ ಮೊತ್ತದಲ್ಲಿ ರೂ. 1,05,000/– ಗಳನ್ನು ಪಾವತಿಸಿದ್ದು, ಉಳಿದ ಮೊತ್ತ ರೂ. 34,000/–ಗಳಿಗೆ ಚೆಕ್ ನೀಡಲು ಕ್ಷೇತ್ರ ಶಿಕ್ಷಣಾಧಿಕಾರಿ ಉತ್ತರ ವಲಯ ಇವರು ಒಟ್ಟು ಬಿಲ್ಲಿನ ಶೇ. 20 ರಂತೆ ರೂ. 26,000/–ಗಳನ್ನು ಲಂಚವಾಗಿ ನೀಡುವಂತೆ ಫಿರ್ಯಾದಿಯನ್ನು ಒತ್ತಾಯಿಸಿರುತ್ತಾರೆ. ಫಿರ್ಯಾದಿಯು ಸದರಿ ಮೊತ್ತವನ್ನು ನೀಡಲು ಮನಸ್ಸಿಲ್ಲದ ಕಾರಣ ದಿನಾಂಕ: 11–04–2012ರಂದು ಗುಲ್ಬರ್ಗಾ ಲೋಕಾಯುಕ್ತ ಠಾಣೆಗೆ ಬಂದು ಪೊಲೀಸ್ ಇನ್ಸ್‌ಪೆಕ್ಟರ್‌ರವರನ್ನು ಭೇಟಿ ಮಾಡಿ ಲಂಚ ಕೇಳುತ್ತಿರುವ ವಿಷಯ ತಿಳಿಸಿ ಲಂಚದ ಸಂಭಾಷಣೆ ಮುದ್ರಿಸಿಕೊಂಡು ಬರಲು ವಾಯ್ಸ್ ರೆಕಾರ್ಡರನ್ನು ತೆಗೆದುಕೊಂಡು ಹೋಗಿರುತ್ತಾರೆ. ಲಂಚದ ಬೇಡಿಕೆಯ ಬಗ್ಗೆ ವಾಯ್ಸ್ ರೆಕಾರ್ಡರನ್ನು ಮಾಡಿಕೊಂಡು ದಿನಾಂಕ: 16–04–2012ರಂದು ಗುಲ್ಬರ್ಗಾ ಲೋಕಾಯುಕ್ತ ಠಾಣೆಗೆ ಬಂದು ಸ್ವಲಿಖಿತ ದೂರನ್ನು ನೀಡಿರುತ್ತಾರೆ. ಈ ಬಗ್ಗೆ ತನಿಖಾಧಿಕಾರಿಯವರು ಪ್ರಕರಣವನ್ನು ದಾಖಲಿಸಿಕೊಂಡು ತನಿಖೆಯನ್ನು ಪ್ರಾರಂಭಿಸಿರುತ್ತಾರೆ.

ದಿನಾಂಕ : 16–04–2012ರಂದು ಕ್ಷೇತ್ರ ಶಿಕ್ಷಣಾಧಿಕಾರಿ ಕಛೇರಿ, ಗುಲ್ಬರ್ಗಾ ಉತ್ತರ ವಲಯ ಕಛೇರಿಯ ಕ್ಷೇತ್ರ ಶಿಕ್ಷಣಾಧಿಕಾರಿಯವರ ಛೇಂಬರಿಗೆ ಫಿರ್ಯಾದುದಾರರು ಸುಮಾರು ಮಧ್ಯಾಹ್ನ 3.15ಕ್ಕೆ ಪ್ರವೇಶಿಸಿದ್ದು, ನಂತರ ಆರೋಪಿತರು ಫಿರ್ಯಾದುದಾರರಿಂದ ಲಂಚದ ಹಣ ರೂ. 26,000/–ಗಳನ್ನು ಬಲಗೈಯಿಂದ ತೆಗೆದುಕೊಂಡು ಎರಡು ಕೈಗಳಿಂದ ಎಣಿಸಿ ತಮ್ಮ ಪ್ಯಾಂಟಿನ ವಾಚ್ ಪಾಕೆಟ್‌ನಲ್ಲಿ ಲಂಚದ ಹಣವನ್ನು ಇಟ್ಟುಕೊಂಡಿದ್ದು ಇನ್ನೂ ರೂ. 4,000/– ನೀಡುವಂತೆ ಕೇಳಿರುತ್ತಾರೆ. ಈ ಸಂದರ್ಭದಲ್ಲಿ ಟ್ರ್ಯಾಪ್ ಮಾಡಲಾಗಿರುತ್ತದೆ. ಹಾಗೂ ಲಂಚದ ಹಣವನ್ನು ವಶಪಡಿಸಿಕೊಳ್ಳಲಾಗಿದೆ. ನೆರಳು ಸಾಕ್ಷಿ ಗುರುಲಿಂಗಪ್ಪರವರು ಅಕ್ರಮ ಸಂಭಾವನೆಯ ಬೇಡಿಕೆ ಪಡೆಯುವಿಕೆಯ ವ್ಯವಹಾರವನ್ನು ಗಮನಿಸಿರುತ್ತಾರೆ.

ಈ ಎಲ್ಲಾ ಕಾರಣಗಳಿಂದ ಆಪಾದಿತರು ಲಂಚ ನಿರೋಧಕ ಕಾಯ್ದೆ 1988ರ ಕಲಂ–7, 13(1)(ಡಿ) ಜೊತೆಯಲ್ಲಿ ಓದಲಾದ 13(2) ಅಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದು ಮೇಲ್ನೋಟಕ್ಕೆ ಮನವರಿಕೆಯಾಗಿದೆ. ಆದ್ದರಿಂದ ಇವರನ್ನು ಲಂಚ ನಿರೋಧಕ ಕಾಯ್ದೆ 1988ರ ಅನ್ವಯ ಕಲಂ–7, 13(1)(ಡಿ) ಜೊತೆಯಲ್ಲಿ ಓದಲಾದ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯ ಎಂದು ಸರ್ಕಾರ ಮನಗಂಡಿದೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಆಪಾದಿತರನ್ನು ಕೆಲಸದಿಂದ ವಜಾ ಮಾಡುವ ಅಧಿಕಾರವನ್ನು ಹೊಂದಿದ್ದು, ಲಂಚ ನಿರೋಧಕ ಕಾಯ್ದೆ 1988ರ ಕಲಂ–19(1)(ಬಿ)ರ ಅಡಿ ಆಪಾದಿತ ನೌಕರರಾದ ಶ್ರೀ ದತ್ತಪ್ಪ ತಳವಾರ, ಕ್ಷೇತ್ರ ಶಿಕ್ಷಣಾಧಿಕಾರಿ, ಉತ್ತರ ವಲಯ, ಗುಲ್ಬರ್ಗಾ ಇವರನ್ನು ಕಲಂ–7, 13(1)(ಡಿ) ಜೊತೆಯಲ್ಲಿ ಓದಲಾದ 13(2)ರ ಅಡಿಯಲ್ಲಿ ದಂಡಾರ್ಹ ಅಪರಾಧ ಎಸಗಿರುವುದರಿಂದ ಸದರಿಯವರನ್ನು ಕಲಂ–19(1)(ಬಿ) ರ ಅಡಿಯಲ್ಲಿ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಸರ್ಕಾರದ ಮಂಜೂರಾತಿ ನೀಡಲು ತೀರ್ಮಾನಿಸಿ ಅದರಂತೆ ಈ ಕೆಳಕಂಡಂತೆ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 24 ಡಿಜಿಓ 2012, ಬೆಂಗಳೂರು, ದಿನಾಂಕ: 19ನೇ ಏಪ್ರಿಲ್, 2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಸರ್ಕಾರವು ಆರೋಪಿಯಾದ ಶ್ರೀ ದತ್ತಪ್ಪ ತಳವಾರ, ಕ್ಷೇತ್ರ ಶಿಕ್ಷಣಾಧಿಕಾರಿ, ಉತ್ತರ ವಲಯ, ಗುಲ್ಬರ್ಗಾ ಹಾಲಿ ಹಿರಿಯ ಉಪನ್ಯಾಸಕರು, ಡಯಟ್, ಯಾದಗಿರಿ ಜಿಲ್ಲೆ ಇವರನ್ನು ಲಂಚ ನಿರೋಧಕ ಕಾಯ್ದೆ 1988ರ ಕಲಂ–7, 13(1)(ಡಿ) ಜೊತೆಗೆ 13(2)ರ ಅಡಿಯಲ್ಲಿ ಶಿಕ್ಷಾರ್ಹ ಅಪರಾದ ಎಸಗಿರುವುದು ದೃಢಪಟ್ಟಿರುವುದರಿಂದ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಗಗೊಳಿಸಲು ಸರ್ಕಾರ ಮಂಜೂರಾತಿಯನ್ನು ನೀಡಿ ಆದೇಶಿಸಿದೆ.

ಮುಂದುವರೆದು, ಕರ್ನಾಟಕ ಸರ್ಕಾರದ (ವ್ಯವಹಾರ) ನಿಯಮಾವಳಿ 1977ರ ನಿಯಮ 18ರ ಪ್ರಕಾರ ಸರ್ಕಾರದ ಪರವಾಗಿ ಅಥವಾ ಸರ್ಕಾರದಿಂದ ಹೊರಡಿಸಲಾಗುವ ಎಲ್ಲಾ ಆದೇಶಗಳನ್ನು ಅಥವಾ ಅಧಿಸೂಚನೆಗಳನ್ನು ಕರ್ನಾಟಕ ಸರ್ಕಾರದ ರಾಜ್ಯಪಾಲರ ಹೆಸರಿನಲ್ಲಿ ಹೊರಡಿಸಬೇಕಿರುತ್ತದೆ.

ಸದರಿ ನಿಯಮಾವಳಿಯ ನಿಯಮ–19(1)(ಬಿ)ರ ಪ್ರಕಾರ ಕರ್ನಾಟಕ ಸರ್ಕಾರದ ರಾಜ್ಯಪಾಲಕ ಹೆಸರಿನಲ್ಲಿ ಹೊರಡಿಸಿರುವ ಆದೇಶಗಳು ಮತ್ತು ಅಧಿಸೂಚನೆಗಳು ಒಬ್ಬ ಅಧೀನ ಕಾರ್ಯದರ್ಶಿಯ ಸಹಿಯಿಂದ ಅಧಿಕೃತಗೊಳ್ಳಬೇಕು ಹಾಗೂ ಅಂತಹ ಸಹಿಯು ಅಂತಹ ಆದೇಶ ಅಥವಾ ಲೇಖನವನ್ನು ಸರಿಯಾಗಿ ಅಧಿಕೃತಗೊಳಿಸುತ್ತದೆ.

ಆದ್ದರಿಂದ ಕರ್ನಾಟಕ ಸರ್ಕಾರದ (ವ್ಯವಹಾರ) ನಿಯಮಾವಳಿಗಳು 1977ರ ಈ ಮೇಲ್ಕಂಡ ಆದೇಶವನ್ನು ಸರ್ಕಾರದ ಪರವಾಗಿ ಕಛೇರಿಯ ಮೊಹರು ಮತ್ತು ಸರ್ಕಾರದ ಅಧೀನ ಕಾರ್ಯದರ್ಶಿಯ ಸಹಿಯ ಅಡಿಯಲ್ಲಿ ದಿನಾಂಕ: 19–04–2013ರಂದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಶ್ರೀಪಾದು ಹೆಚ್.ಎನ್.,**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಸಮಿತಿಗಳು).

**P.R. 566**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಸರ್ಕಾರಿ ಪ್ರಕೃತಿ ಚಿಕಿತ್ಸೆ ಮತ್ತು ಯೋಗ ಮಹಾವಿದ್ಯಾಲಯ, ಮೈಸೂರು ಇಲ್ಲಿನ ಮೂರು ಜನ ಗುತ್ತಿಗೆ ಉಪನ್ಯಾಸಕರ ಗುತ್ತಿಗೆ ಸೇವೆಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ನಿರ್ದೇಶಕರು, ಆಯುಷ್ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ : ಆಯುಷ್/III/ಸಿಬ್ಬಂದಿ(1)/2012–13, ದಿನಾಂಕ: 13–02–2013.
2. ಸರ್ಕಾರದ ಆದೇಶ ಸಂಖ್ಯೆ : ಆಕುಕ 337 ಪಿಟಿಡಿ 2010, ದಿನಾಂಕ 23–11–2010.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಸಂ. (1)ರ ಪತ್ರದಲ್ಲಿ ನಿರ್ದೇಶಕರು, ಆಯುಷ್ ಇಲಾಖೆ ಇವರು ಸರ್ಕಾರಿ ಪ್ರಕೃತಿ ಚಿಕಿತ್ಸೆ ಮತ್ತು ಯೋಗ ವೈದ್ಯಕೀಯ ಮಹಾವಿದ್ಯಾಲಯ, ಮೈಸೂರು ಇಲ್ಲಿ ಗುತ್ತಿಗೆ ಆಧಾರದ ಮೇಲೆ ನೇಮಕಗೊಂಡು, ಉಪನ್ಯಾಸಕರ ಹುದ್ದೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಡಾ॥ ಕೆ.ಎಸ್. ವಿಶ್ವನಾಥ್, ಡಾ॥ ಜಿ.ಪಿ. ಭಾರತಿ ಮತ್ತು ಡಾ॥ ಎನ್. ವನಿತ, ಇವರುಗಳ ಗುತ್ತಿಗೆ ಸೇವಾ ಅವಧಿಯು ದಿನಾಂಕ 04–03–2012ಕ್ಕೆ ಮುಕ್ತಾಯಗೊಳ್ಳುತ್ತಲಿದೆಯೆಂದು, ಸರ್ಕಾರಿ ಪ್ರಕೃತಿ ಚಿಕಿತ್ಸೆ ಮತ್ತು ಯೋಗ ಮಹಾವಿದ್ಯಾಲಯ, ಮೈಸೂರು ಇಲ್ಲಿ 06 ಉಪನ್ಯಾಸಕರುಗಳ ಮಂಜೂರಾದ ಹುದ್ದೆಗಳಿದ್ದು, ಎಲ್ಲಾ ಹುದ್ದೆಗಳು ಖಾಲಿ ಇರುತ್ತವೆಂದು, ಆದುದರಿಂದ ವಿದ್ಯಾರ್ಥಿಗಳ ಹಾಗೂ ಸಂಸ್ಥೆಯ ಹಿತದೃಷ್ಟಿಯಿಂದ ಈ ಮೂರು ಜನ ಉಪನ್ಯಾಸಕರುಗಳ ಸೇವಾ ಅವಧಿಯು ಮುಕ್ತಾಯಗೊಳ್ಳಲಿರುವ ದಿನಾಂಕದ ನಂತರ ಎರಡು ದಿನಗಳನ್ನು ಮೊಟಕುಗೊಳಿಸಿ ಪುನಃ 06 ತಿಂಗಳ ಅವಧಿಗೆ ಅಥವಾ ಕರ್ನಾಟಕ ಲೋಕ ಸೇವಾ ಆಯೋಗದಿಂದ ಹುದ್ದೆಗಳನ್ನು ಖಾಯಂ ಆಗಿ ಭರ್ತಿ ಮಾಡುವವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಸರ್ಕಾರದ ಆದೇಶ ಸಂಖ್ಯೆ ಆಕುಕ 23 ಪಿಟಿಡಿ 2007, ದಿನಾಂಕ 13–03–2007ರ ಅನುಬಂಧದಲ್ಲಿ ನಮೂದಿಸಿರುವ ಷರತ್ತು ಮತ್ತು ನಿಬಂಧನೆಗೊಳಪಟ್ಟು ಮುಂದುವರೆಸಿದ ಆದೇಶ ಹೊರಡಿಸುವ ಬಗ್ಗೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಸಂ. (2) ರ ಸರ್ಕಾರದ ಆದೇಶದಲ್ಲಿ, ಆಯುರ್ವೇದ, ಯೋಗ ಮತ್ತು ನ್ಯಾಚುರೋಪತಿ, ಯುನಾನಿ, ಸಿದ್ದ ಮತ್ತು ಹೋಮಿಯೋಪತಿ (ಆಯುಷ್) ಇಲಾಖೆಯ ಸರ್ಕಾರಿ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯಗಳು, ಬೆಂಗಳೂರು, ಮೈಸೂರು ಮತ್ತು ಬಳ್ಳಾರಿ ಇಲ್ಲಿ ಖಾಲಿ ಇರುವ ಉಪನ್ಯಾಸಕರುಗಳ (ಆಯುರ್ವೇದ) ಹುದ್ದೆಗಳಿಗೆ ಮಾಸಿಕ ಸಂಚಿತ ವೇತನದ ಆಧಾರದ ಮೇಲೆ ಉಪನ್ಯಾಸಕರುಗಳನ್ನು ಗುತ್ತಿಗೆ ಆಧಾರದ ಮೇಲೆ 11 ತಿಂಗಳ ಅವಧಿಗೆ ಕೆಲವು ಷರತ್ತು ಮತ್ತು ನಿಬಂಧನೆಗೊಳಪಟ್ಟು ನೇಮಕ ಮಾಡಲಾಗಿತ್ತು.

ಪ್ರಸ್ತಾವನೆಯನ್ನು ಪರಿಶೀಲಿಸಿರುವ ಸರ್ಕಾರವು, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆಕುಕ 68 ಪಿಟಿಡಿ 2013, ಬೆಂಗಳೂರು, ದಿನಾಂಕ : 07ನೇ ಏಪ್ರಿಲ್ 2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರಿ ಪ್ರಕೃತಿ ಚಿಕಿತ್ಸೆ ಮತ್ತು ಯೋಗ ಮಹಾವಿದ್ಯಾಲಯ, ಮೈಸೂರು ಇಲ್ಲಿನ – 03 ಜನ ಗುತ್ತಿಗೆ ಉಪನ್ಯಾಸಕರುಗಳ 11 ತಿಂಗಳ ಅವಧಿಯ ಗುತ್ತಿಗೆ ಸೇವೆ ಮುಕ್ತಾಯವಾದ ನಂತರ (ಎರಡು ದಿನ ಮೊಟಕುಗೊಳಿಸುವ ಷರತ್ತಿಗೆ ಒಳಪಟ್ಟು – ಹಿಂಬರಹ ನೀಡುವುದು) ಅವರುಗಳ ಸೇವೆಯನ್ನು ಮುಂದಿನ ದಿನಾಂಕದಿಂದ ಪುನಃ 06 ತಿಂಗಳ ಅವಧಿಗೆ ಅಥವಾ ಕರ್ನಾಟಕ ಲೋಕಸೇವಾ ಆಯೋಗದಿಂದ ಹುದ್ದೆಗಳನ್ನು ಖಾಯಂ ಆಗಿ ಭರ್ತಿ ಮಾಡುವವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಸರ್ಕಾರದ ಆದೇಶ ಸಂಖ್ಯೆ : ಆಕುಕ 23 ಪಿಟಿಡಿ 2007, ದಿನಾಂಕ 13–03–2007 ರಲ್ಲಿ ನಮೂದಿಸಿರುವ ಷರತ್ತು ಮತ್ತು ನಿಬಂಧನೆಗೊಳಪಟ್ಟು ಮಾಸಿಕ ಸಂಚಿತ ವೇತನದ ಆಧಾರದ ಮೇಲೆ ಈ ಕೆಳಕಂಡ ಗುತ್ತಿಗೆ ಉಪನ್ಯಾಸಕರುಗಳ ಸೇವೆಯನ್ನು ಮುಂದುವರೆಸಲಾಗಿದೆ.

| ಸರ್ಕಾರಿ ಪ್ರಕೃತಿ ಚಿಕಿತ್ಸೆ ಮತ್ತು ಯೋಗ ಮಹಾವಿದ್ಯಾಲಯ, ಮೈಸೂರು | | | |
|---|---|---|---|
| **ಕ್ರಮ ಸಂಖ್ಯೆ** | **ಹೆಸರು** | **11 ತಿಂಗಳ ಗುತ್ತಿಗೆ ಅವಧಿ ಮುಕ್ತಾಯವಾಗಿರುವ ದಿನಾಂಕ** | **ಮುಂದುವರೆಸಿರುವ 06 ತಿಂಗಳ ಗುತ್ತಿಗೆ ಅವಧಿ ಪ್ರಾರಂಭವಾಗುವ ದಿನಾಂಕ** |
| 1 | ಡಾ॥ ಕೆ.ಎಸ್. ವಿಶ್ವನಾಯಕ್ | 04–03–2013 | 07–03–2013 |
| 2 | ಡಾ॥ ಜಿ.ಪಿ. ಭಾರತಿ | 04–03–2013 | 07–03–2013 |
| 3 | ಡಾ॥ ಎನ್. ವನಿತಾ | 04–03–2013 | 07–03–2013 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಎನ್. ಹರಿಣಿಯಮ್ಮ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಭಾರತೀಯ ವೈದ್ಯ ಪದ್ಧತಿ)

**P.R. 567**

## INFRASTRUCTURE DEVELOPMENT SECRETARIAT

**Subject :** Development of Bijapur Airport - Revoking the Bank Guarantee.

**Read :** 1. Letter NO.MAPL/IDD/GOK/2/2012-13, dtd.27/06/2012 from Director, M/s. Marg Aviations Pvt., Ltd.,

2. G.O.No.IDD 53 DIA 2010, dtd.28/06/2012.

3. Letter NO.53 DIA 10, dtd.28/06/2012 addressed to Manager,Indian Bank, Chennai.

4. Letter NO.MAPL/IDD/GOK/2/12& 13, dtd.28/06/2012 from Director, M/s. Marg Aviations Pvt., Ltd.,

5. Letter dtd.29/06/2012 from AGM, Indian Bank, Harbour Branch, Chennai.

**PREAMBLE :**

In the G.O. read at (2) above, sanction of the Government was accorded to revoke the Performance Bank Guarantee for Rs.2.50 crores given by M/s. Marg Aviations Pvt. Ltd., as the company had communicated in letter read at Sl.No. (1) above that they have taken a stand not to extent the Bank Guarantee and to walk out of the project for which PDA was signed on 18/01/2010.

In the letter read at (3) above, Manager, Indian Bank, Chennai was requested to revoke the P.B.G. for Rs. 2.50 crores given by M/s. MARG Aviations Pvt. Ltd., as they have not discharged the obligations under P.D.A.

In the letter read at (4) above, Director M/s.Marg Aviations Pvt. Ltd., had requested Government of Karnataka not to take any action to invoke the forfeiture clause of the aforesaid Performance Bank Guarantee issued by them in relation to the Bijapur Green field Airport project or, if any action has been initiated to keep the same in abeyance till the extension of validity of Bank Guarantee is done as they have requested their bankers to extend the validity of same.

In the letter read at (5) above, the Assistant General Manager Indian Bank Harbour Branch Chennai has stated that Rs.2.50 crore performance bank guarantee furnished by M/s Marg has been extended for a further period of six months i.e., upto 31/12/2012.

Considering the above developments the following order is issued.

**GOVERNMENT ORDER NO. IDD 53 DIA 2010, BANGALORE, DATED 30th June 2012**

In the circumstances, explained in the preamble, The Government Order No. IDD 53 DIA 2010, dtd 28-06-2012 and the letter No. IDD 53 DIA 2010, dtd. 28-06-2012 issued to the Manager, Indian Bank, Harbour Branch, Chennai is rescinded.

By Order and in the name of the Governor of Karnataka,

**N. MANJULAGEETHA,**

Deputy Secretary to Government,

Infrastructure Development Department.

**P.R. 569**

## INFRASTRUCTURE DEVELOPMENT SECRETARIAT

**Subject :** Development of Bijapur Airport - Revoking the Bank Guarantee.

**Read :** 1. Bank Guarantee No.002/2010, dated 11/01/2010 for an amount of Rs. 2.50 Crores issued by the Indian Bank in favour of Governor of Karnataka.

2. Extended Bank Guarantee No: 01/2012 valid upto 30/06/2012.

3. Letter dated 27.06.2012 of M/s Marg Aviations Pvt. Ltd.

4. Letter No.IDD 53 DIA 2010 dated 28.06.2012 addressed to the Manager, Indian Bank, Harbour Branch, Chennai.

**PREAMBLE :**

The Government of Karnataka had acquired 727 acres of land for Bijapur Airport and M/s Marg was selected as Developer and a Project Development Agreement was signed with them on 18-01-2010. Land lease deed was to be signed after handing over the land. M/s. Marg had given a Performance Bank Guarantee on 13-01-2010 for an amount of Rs. 2.50 crores. The said guarantee was to expire on 10-01-2012. However M/s. Marg had given the extension of the Bank guarantee upto 30-06-2012.

M/s. Marg was requested several times to take possession of the said land and to sign the land lease deed(LLD) to that effect. However Marg had quoted various reasons for delaying the signing of LLD though they were in physical possession with a site office in the said land and had also obtained ROW from the local authorities they have not taken action to sign the LLD as per the PDA requirement.

Later they had expressed that the site for the Airport is not suitable as it required considerable amount of cutting and blasting works which incurs huge expenditure to them. This issue was also discussed in the meeting chaired by the Chief Secretary on 5/06/2012. In the said meeting Chief Secretary gave an opportunity to Marg to identify an alternate location in the lands available with KIADB to have a joint survey with D.C. Bijapur KIADB and the Marg Group. In the meanwhile since the Bank Guarantee is expiring on 30$^{th}$ June 2012, M/s Marg was to extend the guarantee. However, they have not extended the guarantee even in spite of several requests.

In DO.letter dated 25/06/2012 of Secretary, IDD, M/s Marg was intimated to take immediate action for extending validity of the Bank Guarantee as per the terms of project development agreement and in case the Bank Guarantee is not extended within the time, suitable action will be initiated as per the PDA, M/s. Marg has intimated on 27/06/2012 that CMD is travelling out side Chennai and necessary feed back will be provided before 29$^{th}$ June 2012.

Further in the letter read at (3) above, the Director, Marg Ltd., has stated that they have considered the fresh proposal of GOK for alternate land and the challenges associated with it. Regarding the bank guarantee he has stated that due to the non-fulfillment of key obligations the requirement for extension of present performance Bank Guarantee does not arise and it should not be lost sight of that performance is contingent conditional upon the satisfaction of the conditions precedent and other key obligations by the GOK as envisaged in the PDA and he has concluded that in these circumstances they are not obliged to renew the existing performance Bank Guarantee.

In the light of the above said letter, a decision was taken to revoke the Bank Guarantee and to make a claim before the Bank as the developers have taken a stand **not to extend the Bank Guarantee and to walk out of the project for which PDA was signed on 18.01.2010.**

In the above circumstances, a letter was issued to Indian Bank, Harbour Branch, Chennai to revoke the Bank Guarantee in favour of Government of Karnataka.

After considering all the points, following order is hereby issued.

### GOVERNMENT ORDER NO. IDD 53 DIA 2010, BANGALORE, DATED 28$^{th}$ June 2012

In the circumstances, explained in the preamble, Sanction of the Government has been accorded to revoke the Performance Bank Guarantee for Rs.2.50 crores given by M/s Marg Aviation Pvt. Limited, Chennai.

By Order and in the name of the Governor of Karnataka,

**N. MANJULAGEETHA,**

Deputy Secretary to Government,

Infrastructure Development Department.

**P.R. 570**

## INFRASTRUCTURE DEVELOPMENT SECRETARIAT

**Subject :** Appointment of Transaction Advisor for the development of Logistics Parks in Karnataka.

**Read :** G.O No. IDD 83 ITS 2012 dated. 06.11.2012.

**PREAMBLE :**

Feedback Infrastructure Services Pvt. Ltd., Sector Specific Consultants for IDD conducted pre-feasibility studies for the development of Logistics Parks in Karnataka and has submitted the reports, procurement plan for selection of Transaction Advisor for the development of Logistics Parks in Karnataka as per the ToR.

2. IDD floated the RFP for the development of Logistics Parks at Harohalli (Kanakapura) and Hassan on 12/09/2012, after giving wide publicity by advertising through News Papers. The last date for submission of bids was 16/10/2012. Three sealed covers were received from Crisil, Ernst & Young and iDeCK.

3. As per the KTPP Act a Tender Scrutiny Committee was formed vide GO No.IDD/83/ITS/2012 dated 06/11/2012. The member of the Scrutiny Committee evaluated the technical bids of the three bidders and all the three bidders were qualified for opening the financial bids. The financial bids were open on 28-12-2012 and iDeCK was the lowest bidder. Hence the assignment has to be awarded to iDeCK.

4. Hence the following order.

### GOVERNMENT ORDER NO. ID 83 ITS 2012, BANGALORE, DATED 06th February 2013

Under the circumstances explained in the preamble, Government is pleased to accord approval to iDeCK to perform the Transaction Advisory Services for the development of Logistics Parks in Karnataka, for a fee of Rs.47,99,996/- (Forty Seven Lakhs Ninety Nine Thousand Nine Hundred and Ninety Six Only) inclusive of service taxes.

2. The funds will be released as and when the milestones are achieved as per the RFP & contract agreements by iDeCK and timely submission of invoices for release of fee.

3. The expenditure shall be met out under the Budget Head 3451-00-090-1- 06-059 Infrastructure Preliminary Studies other expenditure (Plan) 2012-13.

4. This order is issued in accordance with the delegation of financial powers to Principal Secretary/Secretary to Govt., vide G.O No. FD 04 TFP 2012 dated 27/04/2012.

By Order and in the name of the Governor of Karnataka,

**B. SRIRAMA,**

Under Secretary to Government,

Infrastructure Development Department.

**P.R. 571**

ಸರ್ಕಾರಿ ಕೇಂದ್ರ ಮುದ್ರಣಾಲಯ, ಘಟಕ–2, ಬೆಂಗಳೂರು